


# ಹಾಲಕ್ಕಿ ಒಕ್ಕಲಿಗರ ಜನಪದ ಗೀತಗಳು

ಎನ್. ಆರ್. ನಾಯಕ

ಮಾರ್ಚ, ೧೯೮೩



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಉಪನ್ಯಾಸ ಗ್ರಂಥಮಾಲೆ

೩೩೪

# ಹಾಲಕ್ಕಿ ಒಕ್ಕಲಿಗರ ಜನಪದ ಗೀತಗಳು

ಎನ್. ಆರ್. ನಾಯಕ, ಎಂ.ಎ., ಪಿಎಚ್.ಡಿ.







ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಜೂನ, ೧೯೮೪

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ಈಗ ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ,ವಿಜ್ಞಾನ,ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ

ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೩೩ ಪುಸ್ತಿಕೆಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ, ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯುದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿ ಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ<br>ಧಾರವಾಡ

**ಡಿ. ಎಂ. ನಂಜುಂಡಪ್ಪ**<br>ಕುಲಪತಿಗಳು

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದವರು ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲೂಕಿನ ಹೇರೂರು ಗ್ರಾಮದಲ್ಲಿ ಏರ್ಪಡಿಸಿದ, ೨೯೫ನೆಯ ಉಪನ್ಯಾಸ ಶಿಬಿರದಲ್ಲಿ "ಹಾಲಕ್ಕಿ ಒಕ್ಕಲಿಗರ ಜನಪದ ಗೀತಗಳು" ಎಂಬ ವಿಷಯವನ್ನು ಕುರಿತು ನಾನು ಮಾಡಿದ ಭಾಷಣವು ಇಂದು ಪುಸ್ತಕ ರೂಪದಲ್ಲಿ ಪ್ರಕಟವಾಗುತ್ತಿದೆ. ಈ ಉಪನ್ಯಾಸದಲ್ಲಿ ನಾನು ನನಗೆ ಲಭ್ಯವಾದ, ಹಾಲಕ್ಕಿ ಒಕ್ಕಲಿಗರ ಜನಪದ ಗೀತಗಳಿಂದ ಅವರ ಸಂಸ್ಕೃತಿಯನ್ನು ಪರಿಚಯಿಸಲಿಕ್ಕೆ ಪ್ರಯತ್ನಿಸಿದ್ದೇನೆ. ನನ್ನ ಅಭಿಪ್ರಾಯ ಪೋಷಣೆಗಾಗಿ, ಅವರಲ್ಲಿ ಪ್ರಚಲಿತವಿರುವ ರೂಢಿ, ಸಂಪ್ರದಾಯಗಳನ್ನು ಆಶ್ರಯಿಸಿದ್ದೇನೆ. ಆಕರ ಗ್ರಂಥಗಳ ಅಭಿಪ್ರಾಯ ಶೇಖರಣೆಗಿಂತ ನನ್ನ ಕ್ಷೇತ್ರ ಪರಿವೀಕ್ಷಣೆಯ ಅನುಭವವನ್ನೇ ಹೆಚ್ಚಾಗಿ ಅವಲಂಬಿಸಿದ್ದೇನೆ.

ಬಯಲಾಟ, ಹರಿದಿನ, ಶಾಸ್ತ್ರಸಂಪ್ರದಾಯ, ಕಥನ ಕವನಗಳ ವಿಚಾರವಾಗಿ ಇನ್ನೂ ಸ್ವಲ್ಪ ವಿವರವಾಗಿ ಹೇಳಿ,ಉದಾಹರಣೆಗಳಿಂದ ಹೆಚ್ಚು ಸ್ಪಷ್ಟಪಡಿಸಬಹುದಿತ್ತು. ಆದರೆ ಪ್ರಬಂಧದ ಇತಿಮಿತಿಗೊಳಪಟ್ಟು ಅನೇಕ ವಿಷಯಗಳನ್ನು ಮೊಟಕುಗೊಳಿಸಿದ್ದೇನೆ. ಹೊಸ ವಿಚಾರಗಳಿದ್ದಲ್ಲಿ ಹಿಗ್ಗಿಸಿ ಹೇಳಿದ್ದೇನೆ. ಇನ್ನೂ ಕೆಲವು ಅಂಶಗಳು, ನನ್ನ ಸೀಮಿತ ಬುದ್ಧಿ ಪರಿಧಿಯ ಆಚೆಗುಳಿದಿರಬಹುದೆಂಬ ಎಚ್ಚರಿಕೆ ನನಗಿದೆ. ಒಟ್ಟಿನಲ್ಲಿ ಈ ಉಪನ್ಯಾಸ ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ ಪರಿಚಯಕ್ಕೆ ಆಸಕ್ತಿ ತಾಳಿದವರ ಕುತೂಹಲ ಕೆರಳಿಸಿದರೆ ಸಾಕು, ನನ್ನ ಶ್ರಮ ಸಾರ್ಥಕವಾಯಿತೆಂದು ಬಗೆಯುತ್ತೇನೆ.

ಈ ವಿಷಯುವನ್ನು ಕುರಿತು ಉಪನ್ಯಾಸ ನೀಡಲು ನನಗೆ ಸೂಚಿಸಿದ, ಕರ್ನಾಟಕ ವಿಶ್ವವಿದ್ಯಾಲಯು ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿ ಅವರಿಗೂ, ಉಪ ನಿರ್ದೇಶಕರಾದ ಶ್ರೀ ಎಸ್. ಬಿ. ನಾಯುಕ ಅವರಿಗೂ, ಸಹಾಯುಕ ನಿರ್ದೇಶಕರಾದ ಶ್ರೀ ಎಲ್. ಎಂ. ಗುಡ್ಡೀನ ಅವರಿಗೂ ನಾನು ಈ ಸಂದರ್ಭದಲ್ಲಿ ನನ್ನ ಕೃತಜ್ಞತೆಗಳನ್ನು ಅರ್ಪಿಸದಿರಲಾರೆ.

ಶ್ರೀ ಧರ್ಮಸ್ಥಳ
ಮಂಜುನಾಥೇಶ್ವರ ಕಾಲೇಜು
ಹೊನ್ನಾವರ, ಉತ್ತರ ಕನ್ನಡ.
೩೦–೩–೧೯೮೨

**ಎನ್. ಆರ್. ನಾಯುಕ**

## ಅನುಕ್ರಮಣಿಕೆ

# ೧. ಹಾಲಕ್ಕಿ ಒಕ್ಕಲಿಗರು

## ೧. ಸಮಾಜ ವ್ಯವಸ್ಥೆ :

ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಇತರ ವಲಸೆಗಾರರಿಗಿಂತ ಪೂರ್ವದಲ್ಲಿ, ಹಾಲಕ್ಕಿ ಒಕ್ಕಲಿಗರು ಮೈಸೂರು ಕಡೆಯಿಂದ ಬಂದು ತಳವೂರಿದರೆಂದು ಹೇಳಲಾಗುತ್ತದೆ.[೧] ಈ ಜಿಲ್ಲೆಯ ಕಾರವಾರ, ಅಂಕೋಲಾ, ಕುಮಟಾ ಮತ್ತು ಹೊನ್ನಾವರ ಈ ನಾಲ್ಕು ತಾಲೂಕುಗಳಲ್ಲಿ ಇವರ ವಸತಿಯಿದೆ. ಘಟ್ಟದ ಮೇಲಿನ ತಾಲೂಕುಗಳಲ್ಲಿ ಹಾಲಕ್ಕಿಗಳು ಕ್ವಚಿತ್ತಾಗಿದ್ದರೂ, ಅವರೆಲ್ಲ ಹೊಟ್ಟೆಯ ಪಾಡಿಗಾಗಿ ಘಟ್ಟಕ್ಕೆ ದುಡಿಯ ಬಂದವರು. ಹಾಲಕ್ಕಿ ಒಕ್ಕಲಿಗರು ತಾವಿರುವ ಪ್ರದೇಶಗಳನ್ನು ೧)ಹೆಬ್ಬಾನ ಕೇರಿ ೨) ಚಂದಾವರ ೩) ಗೋಕರ್ಣ ೪) ಅಂಕೋಲಾ ೫) ಸಾಡ್ಗೇರಿ ಹೀಗೆ ಅಯ್ದು ಸೀಮೆಗಳಲ್ಲಿ ಹಿಂದಕ್ಕೆ ವಿಭಜಿಸಿಕೊಂಡಿದ್ದರು. ಪ್ರತಿ ಸೀಮೆಗೆ ಸೀಮೆಗೌಡ, ಅವನ ಕೈಕೆಳಗೆ ಊರ ಗೌಡನಿರುತ್ತಿದ್ದನು. ಇವರೆಲ್ಲರ ಮೇಲೆ ಅರಸುಗೌಡ, ಪ್ರಧಾನಿಗೌಡ, ಗುರುಗೌಡರಿರುತ್ತಿದ್ದರು. ಪ್ರತಿ ಗೌಡನ ಕೈಕೆಳಗೆ ಕೋಲ್ಕಾರನಿರುತ್ತಿದ್ದನು. ಇವರೆಲ್ಲರ ಅಧಿಕಾರ ವಂಶಪರಂಪರೆಯಿಂದ ಬಂದಂಥವು. ಜಾತಿಯ ಜನರ ತಂಟೆ ತಕರಾರುಗಳನ್ನು ತೀರಿಸುವವ ಊರ ಗೌಡ; ಅವನಿಂದ ಜಗಳ ಬಗೆಹರಿಯದಿದ್ದಲ್ಲಿ ಸೀಮೆಗೌಡ, ಅವನಿಂದಲೂ ಪರಿಹಾರ ದೊರಕದಿದ್ದಲ್ಲಿ ಅರಸುಗೌಡ ನ್ಯಾಯ ನಿವಾಲೆ ಮಾಡುತ್ತಿದ್ದನು. ಅರಸುಗೌಡನ ತೀರ್ಮಾನವೇ ಕೊನೆಯದು.[೨]

೧. ಓದು: Gazetteer of the Bombay Presidency Vol. XIV. P. 202

೨. „ „ „ „ P. 211-212

ಇತ್ತೀಚೆಗೆ ಈ ಸಾಮಾಜಿಕ ವ್ಯವಸ್ಥೆ ಕುಸಿದಿದ್ದರೂ ಕೆಲವೆಡೆ ಇನ್ನೂ ಉಳಿದುಕೊಂಡಿದೆ.

೨. **ಸಂಸ್ಕೃತಿ:**

ಹಾಲಕ್ಕಿ ಒಕ್ಕಲಿಗರನ್ನು ಟೋಟೆಮಿಸಂ ಸಂಸ್ಕೃತಿಗೆ ಸೇರಿದವರೆಂದು ಪರಿಗಣಿಸಲಾಗುತ್ತದೆ.[೩] ಈ ಸಂಸ್ಕೃತಿಯವರು ತಮ್ಮ ಕುಲ ಸಂಬಂಧವನ್ನು ಪ್ರಾಣಿ ಇಲ್ಲವೇ ವನಸ್ಪತಿಗಳಿಂದ ಹೇಳಿಕೊಳ್ಳುವರು. ಕುಲ ಸಂಬಂಧವುಳ್ಳ ಪ್ರಾಣಿಗಳನ್ನು ಇಲ್ಲವೆ ವನಸ್ಪತಿಗಳನ್ನು ಪಿತೃಸ್ಥಾನದಲ್ಲಿರಿಸಿ ಪೂಜ್ಯವೆಂದು ತಿಳಿಯುತ್ತಾರೆ. ಈ ಬಗೆಯ ಕುಲ ಸಂಬಂಧಕ್ಕೆ 'ಬಳ್ಳಿ' ಇಲ್ಲವೆ 'ಬಳಿ'ಯೆಂದು ಕರೆಯುತ್ತಾರೆ. ಸುಮಾರು ಇಪ್ಪತ್ತು ಬಳ್ಳಿಗಳು ನನಗೆ ಲಭ್ಯವಾಗಿವೆ: ೧. ಕೇದಗೆ ೨) ಕುಂಟಿ ೩) ಮುಂಜಾಳ ೪) ಕೊಡಕಲ(ಕೊಡಸಿನ) ೫) ಗುರಾಣಿ (ಗುರಿನ) ೬) ಶಿರ್‍ಯಾಳು ೭) ನೇಗಿ(ನೆಗ್ಗಿನ) ೮) ಬೆದ ೯) ದೇವನ (ದೇವರ) ೧೦) ಮುಸಗೆ (ಮುಸಗಿನ) ೧೧) ಕಡಿನ ೧೨) ಬಳಿ ೧೩) ಆಲಿ ೧೪) ದೇವಿ ೧೫) ಬರಕನ ೧೬) ಶಿರಿನ ೧೭) ಗೊಡಕ(ಗೊಟಕ) ೧೮) ಬೈರ ೧೯) ಮಂಗಳ ೨೦)ದ್ಯಾವಳ ಇತ್ಯಾದಿ. ಆಯಾ ಬಳ್ಳಿಗೆ ಸಂಬಂಧಪಟ್ಟವರು ತಮ್ಮ ಬಳ್ಳಿಯ ವನಸ್ಪತಿ ಇಲ್ಲವೆ ಪ್ರಾಣಿಗಳನ್ನು, ನಾಶಗೊಳಿಸದೆ ಅವುಗಳ ಹಿತ ರಕ್ಷಣೆಯಲ್ಲಿ ಕಾಳಜಿ ವಹಿಸುತ್ತಾರೆ.

ಹಾಲಕ್ಕಿ ಒಕ್ಕಲಿಗರು ತಮ್ಮನ್ನು ಪಾಂಡವರ ಕುಲದವರೆಂದು ಹೇಳಿಕೊಳ್ಳುತ್ತಾರೆ. ಪ್ರಾಣಿ ಸಂಕೇತವುಳ್ಳ ಅರ್ಜುನನ ಕಪಿಧ್ವಜ, ದುರ್ಯೋಧನನ ಸರ್ಪಧ್ವಜಗಳು "ಟೋಟೆಮಿಸಂ" ಸಂಸ್ಕೃತಿಯ ಸಂಕೇತಗಳಿರಬೇಕು. ಪಾಂಡವರು ಬಹುಪತಿತ್ವವನ್ನು ಒಪ್ಪಿಕೊಂಡು ಅಣ್ಣ ತಮ್ಮಂದಿರೆಲ್ಲ ದ್ರೌಪದಿಯೊಬ್ಬಳನ್ನೇ ಭೋಗಿಸಿದರು.

೩. ಡಾ: ಎಸ್. ಶಿಲ್ವಾ: ಕಾರವಾರ ಜಿಲ್ಲಾ ದರ್ಶನ ಪು. ೧೮

ಈ ಹಿನ್ನೆಲೆಯಲ್ಲಿ ಹಾಲಕ್ಕಿ ಒಕ್ಕಲಿಗರಲ್ಲಿ ಪ್ರಚಲಿತವಿರುವ ಅಣ್ಣನ ಹೆಂಡತಿಯನ್ನು, ಅಣ್ಣ ಬದುಕಿರುವಾಗಲೇ ತಮ್ಮ ಭೋಗಿಸುವ ಸಂಪ್ರದಾಯವನ್ನು ಪರಾಮರ್ಶಿಸಬೇಕು.[೪] ಹಾಲಕ್ಕಿ ಒಕ್ಕಲಿಗರು "ನಾವ್ ಹೇಳುತೇವೋ ಪಾಂಡೋರ್ ಪದನಾವಾ" ಎಂದು ಪಾಂಡವರನ್ನು ಕುರಿತು ಪದ ಹೇಳಲಿಕ್ಕೆ ವಿಶೇಷ ಸಂತೋಷ ತಾಳುತ್ತಾರೆ. ಅವರ ಗೀತಗಳಲ್ಲಿ ಪಾಂಡವರ ಕಥೆ ಹಾಗೂ ಪಾಂಡವರ ಪ್ರಸ್ತಾಪ ಮೇಲಿಂದ ಮೇಲೆ ಬರುತ್ತವೆ. ಈ ಹಿನ್ನೆಲೆಯನ್ನು ಬೆದಕಿದಲ್ಲಿ ಹಾಲಕ್ಕಿಗಳು ತಮ್ಮನ್ನು ಪಾಂಡವರ ಕುಲದವರೆಂದು ಕರೆದುಕೊಂಡುದರಲ್ಲಿ ಅರ್ಥವಂತಿಕೆಯಿದೆ.

### ೩. ಹಾಲಕ್ಕಿ ಶಬ್ದದ ಉಪಪತ್ತಿ:

'ಹಾಲಕ್ಕಿ' ಎಂಬ ಹೆಸರು ಹಾಲು + ಅಕ್ಕಿ–ಎಂದರೆ ಹಾಲಿನಂತಹ ಬೆಳ್ಳಗಿನ ಅಕ್ಕಿಯನ್ನು ಬೆಳೆಯುವದರಿಂದ ಬಂದಿರಬೇಕೆಂಬ ಊಹೆಯಿದೆ.[೫] ಹೀಗೆನ್ನುವುದಕ್ಕಿಂತ ಒಕ್ಕಲುತನಕ್ಕೆ ಪೋಷಕವಾದ ಹಾಲು–ಹೈನದ(ಪಶು ಸಂಗೋಪನ) ವೃತ್ತಿ ಮತ್ತು ಅಕ್ಕಿಯ ಬೇಸಾಯ ಎರಡನ್ನೂ ಪ್ರಮುಖ ಹೋರೆಯನ್ನಾಗಿಟ್ಟುಕೊಂಡ ಪ್ರಯುಕ್ತ, 'ಹಾಲಕ್ಕಿ' ಎಂಬ ಹೆಸರು ಬಂದಿರಬೇಕೆಂದು ಹೇಳುವುದು ಸೂಕ್ತ. ಈ ಜನರಿಗಿರುವ 'ಗೌಡ' ಎನ್ನುವ ಅಡ್ಡಹೆಸರು ಗೋವಳ> ಗವುಳ> ಗವುಡ> ಗೌಡ ಹೀಗೆ ನಿಷ್ಪನ್ನವಾಗಿರಬೇಕು.[೬]

---

೪ ಈ ಸಂಪ್ರದಾಯ ಕಿಷ್ಕಿಂಧೆಯ ಸಂಸ್ಕೃತಿಯನ್ನು ಹೋಲುತ್ತದೆಯೆಂದು ಶ್ರೀ ಗೌರೀಶ ಕಾಯ್ಕಿಣಿಯವರ ಅಭಿಪ್ರಾಯ.

೫. ಓದು: Gazetteer of the Bombay Presidency Vol. XIV. P.2.2.

೬. ಗ್ರಾಮ + ಮುಂಡ> ಗ್ರಾಮುಂಡ> ಗಾಮುಂಡ> ಗಾವುಂಡ> ಗೌಂಡ > ಗೌಡ ಎಂದೂ "ಗೌಡ" ಪದದ ಉತ್ಪತ್ತಿ ಹೇಳುತ್ತಾರೆ.

ಹಾಲಕ್ಕಿ ಒಕ್ಕಲಿಗರ ಗುಮಟೆಯ ಪದವೊಂದು, "ಮಾದೇವ ರಾಯನು ಪಾಲಿನ ಊಟಕ್ಕಾಗಿ ಹಾಲಕ್ಕಿ ಒಕ್ಕಲಿಗರನ್ನು ಸೃಷ್ಟಿಸಿದನು." ಎಂದು ಹೇಳುತ್ತದೆ. ಮಾದೇವರಾಯನು ಹಾಲಕ್ಕಿಗಳನ್ನು ಕುರಿತು ಹೀಗೆನ್ನುತ್ತಾನೆ :

ಹಾಲಲ್ ಹುಟ್ಟಿದ್ರೋ ಹಾಲಕ್ಕಿ ಮಕ್ಕಳು ನೀವು
ಮಯ್ಲೊಗಿ ಮಡಿಯು ನಿಮಗಿಲ್ಲಾ |

ಹಾಲಕ್ಕಿಗಳನ್ನು ಕುರಿತ ಇನ್ನೊಂದು ಐತಿಹ್ಯ ಹೀಗಿದೆ : ಹೊಲದಲ್ಲಿ ದುಡಿಯುತ್ತಿದ್ದ ಪರಮೇಶ್ವರನಿಗೆ ಪಾರ್ವತಿಯು ಮಣ್ಣು ಮಡಿಕೆಯಲ್ಲಿ ಹಾಲು ಅನ್ನ ತೆಗೆದುಕೊಂಡು ಹೋಗುವಾಗ ಕಾಲುಜಾರಿ ಬಿದ್ದಳು. ಮಡಿಕೆಯೊಡೆದು ಹಾಲು ಅನ್ನ ಮಣ್ಣು ಪಾಲಾಯ್ತು. ಅವಳು ಪುನಃ ಮನೆಗೆ ಬಂದು, ಹಾಲು ಅನ್ನ ಗಂಡನಿಗೊಯ್ದಳು. ಹೋಗುವಾಗ ಈ ಮೊದಲು ಹಾಲು ಅನ್ನ ಚೆಲ್ಲಿದ ಸ್ಥಳಕ್ಕೆ ಬಂದು ಕುಳಿತು. ಚೆಲ್ಲಿದ ಹಾಲು ಮತ್ತು ಅನ್ನದಿಂದ ಒಂದು ಹೆಣ್ಣು ಇನ್ನೊಂದು ಗಂಡು ಹೀಗೆ ಎರಡು ಗೊಂಬೆ ಮಾಡಿದಳು ಮತ್ತು, ಹಾಲು ಅನ್ನದ ಮಡಿಕೆಯನ್ನೊಯ್ದು ಗಂಡನೆಡೆಹೋಗಿ, ಗಂಡನಿಗೆ ಬಡಿಸಿದಳು. ತಾನು ಬರಲಿಕ್ಕೆ ತಡವಾದ ಕಾರಣ ವಿವರಿಸಿದಳು. ಗಂಡನ ಊಟವಾದ ಮೇಲೆ, ಅವನನ್ನು ತಾನು ಮಾಡಿಟ್ಟ ಗೊಂಬೆಗಳೆಡೆ ಕರೆದು ತಂದು, ಅವುಗಳಿಗೆ ಜೀವದಾನ ಮಾಡಲು ಬೇಡಿಕೊಂಡಳು. ಗಂಡ ಅವುಗಳಿಗೆ ಪ್ರಾಣ ತುಂಬಿದ. ಅವರೇ ಹಾಲಕ್ಕಿ ಗೌಡ ಮತ್ತು ಗೌಡತಿಯರಾದರು. ಮುಂದೆ ಅವರ ಮದುವೆಯಾಗಿ ಹಾಲಕ್ಕಿ ಸಂತಾನ ಬೆಳೆಯಿತು.[೭] ಈ ಎಲ್ಲ ಆಧಾರಗಳ ಮೇರೆಗೆ ಹಾಲು ಮತ್ತು ಅಕ್ಕಿ ಇವೆರಡರ ಜೊತೆಗೆ ಹಾಲಕ್ಕಿಗಳ ಸಂಬಂಧ ಹೆಣೆಯುವುದು ಸೂಕ್ತವೆನಿಸುತ್ತದೆ.

೭. ಶ್ರೀಮತಿ ಶಾಂತಿ ನಾಯಕ. ಸುಧಾ (೧೯೭೧)

ಹಾಲಕ್ಕಿಯೆಂಬ ಶಕುನದ ಹಕ್ಕಿಯಿದೆ. ಈ ಹಕ್ಕಿಯಿಂದ ಇವರಿಗೆ ಈ ಹೆಸರು ಬಂದಿರಬಹುದೆ?[೮]

## ೪. ಚೆನ್ನಿಗಂಟಿದ ದಾರಿದ್ರ್ಯ :

ಹಾಲು ಮತ್ತು ಅಕ್ಕಿಯ ಜೊತೆಯಲ್ಲಿ ಇವರ ಸಂಬಂಧ ಹೊಂದಿಸಿದರೂ ಹಾಲನ್ನ ಇವರಿಗಿಲ್ಲ. ಇವರ ಪಾಲಿಗೆ ನಿತ್ಯ ರಾಗಿ ಅಂಬ್ಲಿ ಮತ್ತು ಉಳಿಕಡಿ.[೯] ಅನುಕೂಲಸ್ಥರು ಮಾತ್ರ ಕುಚ್ಚಿಗಿ ಅಕ್ಕಿ ಅನ್ನ, ಮೀನಿನ ಪಳದಿಗೆ[೧೦] ಬಾಧ್ಯಸ್ಥರು. ಇವರ ಮುಗ್ಧ ಪ್ರಾಮಾಣಿಕತೆ, ನಿರಕ್ಷರತೆಯ ಕಾರಣದಿಂದಾಗಿ ಹಲವರ ಶೋಷಣೆಗೆ ಇವರು ಗುರಿಯಾಗಿದ್ದಾರೆ. ಅಸ್ಪೃಶ್ಯರಲ್ಲದಿದ್ದರೂ ಇವರ ಸ್ಥಿತಿ ಅಸ್ಪೃಶ್ಯರಿಗಿಂತ ಮಿಗಿಲಾಗಿಲ್ಲ.

ದುಡಿಮೆ ಹಾಲಕ್ಕಿಗಳ ಬಾಳ ಸಂಗಾತಿ. ಇವರ ಕುಟುಂಬದ ಕೇಂದ್ರ ಬಿಂದು ಹೆಣ್ಣು. ಕುಟುಂಬದ ಕೆಲಸ ಬೊಗಸೆಗಳಲ್ಲಿ ಅವಳದೇ ಸಿಂಹಪಾಲು. ಹೊತ್ತಾರೆ ಯಾರು ಏಳುವ ಮೊದಲೆದ್ದು ಮನೆಗೆಲಸ ಮುಗಿಸಿ ಮಕ್ಕಳನ್ನು ಸಂತೈಸಿ, ಅಂಬಲಿ ಬೊಡ್ಡೆ ಹೊತ್ತು ಕೆಲಸಕ್ಕೆ ನಡೆಯಬೇಕು. ತಿರುಗಿ ಮನೆಗೆ ಬರುವುದು ಹೊತ್ತು ಕಂತುವಾಗ. ಚಿಕ್ಕ ಮಕ್ಕಳಿಗೂ ಇವರಲ್ಲಿ ಬಿಡುವಿಲ್ಲ. "ಶಿದ್ದೆ[೧೧] ಯಂತಾ ಮಕ್ಕಿದ್ರೆ ಶಿದ್ದೆ ತರೂಕ್[೧೨] ಆದಾರಾ" ಎನ್ನು

---

೮. ಶ್ರೀ ಗೌರೀಶ ಕಾಯ್ಕಿಣಿ ಹೀಗೆ ಊಹಿಸುತ್ತಾರೆ : ಪಾಲಕಿ = ಪಲ್ಲಕ್ಕಿ ಹಾಲಕೀ = ಹಾಲಕ್ಕಿ. ಹಲಾಕ್ ಅಂದರೆ ಹಿಂದಿಯಲ್ಲಿ Labour oppressed ಅಂದರೆ ಈ ಜನ ಮೂಲತಃ ಬೇಸಾಯದ ತೀರ ಕೆಳಮಟ್ಟದ (ಶ್ರೇಣಿಯ) ದಲಿತ ಕೂಲಿಕಾರರು Land Labourers. ಅವರಿಗೆ ಅದೊಂದೇ ಗೊತ್ತು. ಹಲಾಕ್‌ದಿಂದ ಹಾಲಕಿ (ಹಾಲಕ್ಕಿ) ಬಂದಿರಬಹುದು.

೯. ಒಂದು ಬಗೆಯ ಹುಳಿ ಪದಾರ್ಥ. ೧೦. ಮೀನಿನ ಸಾರು.

೧೧. ನಾಲ್ಕು ಸೊಲಿಗೆಯ ಅಳತೆ ಪಾತ್ರೆ ೧೨. ತರಲಿಕ್ಕೆ

ತ್ತಾರೆ ಹಾಲಕ್ಕಿಗಳು. ಆದರೂ ಕ್ರಮಬದ್ಧ ಜೀವನ ಅರಿಯದವರೂ ಬೋಳೆಯ ಸ್ವಭಾವದವರೂ ಇವರಾದ್ದರಿಂದ ಇವರಲ್ಲಿ ದಟ್ಟದಾರಿದ್ರ್ಯ ತುಂಬಿದೆ.

### ೫. ಸರಸ ಸುಂದರ ಬದುಕು :

ವಾಸ್ತವಿಕ ಬದುಕಿಗೆ ಬೆನ್ನುಮಾಡಿ. ಇಲ್ಲದ್ದಕ್ಕೆ ಕೈಚಾಚುವವರಲ್ಲ ಹಾಲಕ್ಕಿಗಳು. ಭೌತಿಕ ಪ್ರಪಂಚದಲ್ಲಿ ಶ್ರದ್ಧೆಯಿಟ್ಟು, ಲೌಕಿಕ ಸುಖ ಭೋಗದಿಂದ ವಂಚಿತರಾಗದೆ ಸಿಕ್ಕಷ್ಟು ಸುಖದಲ್ಲಿಯೇ ಸಂತೃಪ್ತಿ ಪಡೆಯುವವರು. ತಮ್ಮ ಕುಟುಂಬ, ಹೊಲ, ಮನೆ, ತಮ್ಮೂರು ಮತ್ತು ಪೇಟೆ ಇವಿಷ್ಟೆ ಹಾಲಕ್ಕಿ ಒಕ್ಕಲಿಗರ ಪ್ರಪಂಚ. ಬಂಡುಕೋರತನ, ಕ್ರಾಂತಿ ಅವರಿಂದ ದೂರ. ಯಾರು ಎಷ್ಟೇ ಹಿಂಸಿಸಲಿ ಶೋಷಣೆ ಮಾಡಲಿ ಮೂಕ ಪಶುವಿನಂತೆ ಸಹಿಸಿ, ಗುರು ಹಿರಿಯರಲ್ಲಿ, ದೇವರಲ್ಲಿ ಭಕ್ತಿ ಗೌರವವನ್ನು ಅರ್ಪಿಸುವಲ್ಲಿಯೇ ಬದುಕಿನ ಸಾರ್ಥಕತೆ ಕಂಡುಕೊಂಡವರು. ಅವರ ನಡೆನುಡಿಗಳೆಲ್ಲ ನೇರ, ಸರಳ. ಅವರ ಬದುಕು ಬಿಚ್ಚುಮುಗ್ಗಿ. ಸ್ವಚ್ಛಂದ ಸುಂದರವಾದ ದ್ವಂದ್ವವಿಲ್ಲದ ಪ್ರಶಾಂತ ಜೀವನ ಅವರದು. ಮಳೆ, ಬೆಳೆ ಸಮೃದ್ಧಿಯಾದರೆ ಹಿಗ್ಗಿ ಕುಣಿದರು; ಇಲ್ಲ ತೆಪ್ಪಗಾದರು. ಇದ್ದರೆ ಉಂಡರು; ಇಲ್ಲ ನೆಕ್ಕನೆ[೧೩] ಬೋನ[೧೪]ಕ್ಕೆ ಮುಖಮಾಡಿಯೋ, ಅಡ್ಡ ಮಲಗಿ, ಗಾಂಡಿಗೆ[೧೫] ಕೈ ಹಾಕಿಯೋ ಮಲಗಿದರು.

ತಾವು ಬೆವರು ಸುರಿಸಿ ದುಡಿದು. ಬರಿನೆಲದಲ್ಲಿ ಉಟ್ಟ ಕಚ್ಚೆಯ ಮೇಲೆ ಮಲಗಿದರೂ, ಸುಪ್ಪತ್ತಿಗೆಯ ಮೇಲೆ ಮಲಗುವ ಶೋಷಕರ ವಿಷಯದಲ್ಲಿ ಇವರಿಗೆ ತಿರಸ್ಕಾರವಿಲ್ಲ. ಬೆಳೆದದ್ದು ತಮಗೆ ಸಾಲದಿದ್ದರೂ, ಬಾಗಿಲಿಗೆ ಬಂದವರನ್ನು ಇವರು ಹಿಂಕೆದ್ಯ

---

೧೩. ಮೇಲ್ಮುಖ ಮಾಡಿ ೧೪. ಆಕಾಶ ೧೫. ತೊಡೆಗಳ ಮಧ್ಯ.

ಕಳಿಸಲಾರರು. ತಮಗಿಲ್ಲದಾಗ ಇನ್ನೊಂದೆಡೆ ಕೈಚಾಚುವ ಬುದ್ಧಿಯೂ ಇವರಿಗಿಲ್ಲ.

**೬. ಹಾಡು ಬದುಕಿನ ಒಡನಾಡಿ :**

ಇವರ ದುಡಿಮೆಯ ದಣಿವನ್ನು ಅವಿಗೊಳಿಸಿ, ಬದುಕಿನಲ್ಲಿ ನೆಮ್ಮದಿ ಕೊಡುವ ಜೀವನ ಸಂಗಾತಿಯೆಂದರೆ ಹಾಡು-ಪದ. ಅವರು ಪಟ್ಟಪಾಡೇ ಪದ-ಪಾಡು. ಇವರ ಬದುಕಿಗೂ ಹಾಡಿಗೂ ಅವಿನಾಭಾವಿ ಸಂಬಂಧ. ಇವರ ಹಾಡಿನಲ್ಲಿ ರಾಗ ಲಯಗಳಿಗೇ ಪ್ರಾಧಾನ್ಯ. ಅನೇಕ ವೇಳೆ ಅರ್ಥ ಗೌಣ :

ಹಾಡೀನ ದನಿಕೇಳಿ ಹೂಡೂಕೋದಣ್ಣ ಬಂದ
ಹಾಡೆಂಗೆ ಇರ್ಲೆ ದನಿಚೆಂದ । ತಂಗೀ ಕೇಳೇ
ಪಾಡೀನ ದನಿಗೆ ಹಚುಂ೯ ವಿಲ್ಲ!

ಹಾಡು, ಹಾಡಿನ ಮಾಧುರ್ಯ ಹೇಗಿದ್ದರೂ, ಅದರ 'ದನಿ' ಧಾಟಿ ಚೆಂದ. ರಾಗಾಲಾಪ ಮನಮೋಹಕ.

ಹಾಡು ಹೇಳಿದರೆ, ಬೆಳೆ ಚೆನ್ನಾಗಿ ಬರುತ್ತದೆ; ಪ್ರಾಣಿ ಸಸ್ಯಗಳೂ ಮೋದ ತಾಳುತ್ತವೆ ಎಂಬ ಭಾವನೆ ಹಾಲಕ್ಕಿಗಳಲ್ಲಿದ್ದಂತಿದೆ. ಅದಕ್ಕಾಗಿ ಅವರು ಹೂಡುವಾಗ, ಬಿತ್ತುವಾಗ, ಸಸಿ ನೆಡುವಾಗ, ಕಳೆ ತೆಗೆಯುವಾಗ, ಒಂದೇ ಸಮನೆ ಹಾಡಿದರು; ಮೈದಣಿವು ಮರೆತು ಮನಸ್ಸನ್ನು ಹಗುರಗೊಳಿಸಿಕೊಂಡರು: ಸುತ್ತು ಮುತ್ತಲಿನ ಪರಿಸರವನ್ನು ಉಲ್ಲಸಿತಗೊಳಿಸಿದರು. ಇವರಿಗೆ ಹಾಡು ಕೇವಲ ಮನೋವಿಲಾಸಕ್ಕಲ್ಲ, ಪರಿಸರದ ಹಿಗ್ಗಿಗೆ. ಸಾಮವೇದವನ್ನು ಈ ಜನ ಅರಿಯದಿದ್ದರೂ ಹಾಡಿನಿಂದ ಸಕಲ ಪ್ರಪಂಚ ತಣಿಯುತ್ತದೆಯೆಂಬ ನಂಬಿಕೆಗೆ ಅಂಟಿಕೊಂಡವರು.

---

೧೬. ಹಸುವಿಲ್ಲ

ತಮ್ಮನುಭವಕ್ಕೆ ನಿಲುಕದ ವಸ್ತುವಿನತ್ತ ಕೈಚಾಚಿ ಹೈರಾಣಾಗುವ ಮುಂಕುತನ ಹಾಲಕ್ಕಿ ಒಕ್ಕಲಿಗರಲ್ಲಿಲ್ಲ. ಹೀಗಾಗಿ ಅವರ ಬೇಟೆ, ಬೇಸಾಯ. ಸುತ್ತುಮುತ್ತಲಿನ ವಸ್ತು ವಿಶೇಷಗಳು, ದೇವರು ಹಬ್ಬ ಹರಿದಿನಗಳು, ಇತಿಹಾಸ ಪುರಾಣ ಪ್ರಸಂಗಗಳು, ಕೌಟುಂಬಿಕ ಜೀವನದ ಹತ್ತು ಹಲವಾರು ಸಮಸ್ಯೆಗಳು, ಇವರ ಹಾಡಿನ ವಸ್ತುಗಳಾಗಿವೆ. ಇವರ ಹಾಡುಗಳಲ್ಲಿ ಇವರ ರಸಿಕ ಬದುಕಿನ, ಜೀವನ ಸೌಂದರ್ಯದ, ನೀತಿ ನಿಯಮಗಳ, ರೂಢಿ ಸಂಪ್ರದಾಯಗಳ ಪರಿಪಾಕವನ್ನು ಕಾಣಬಹುದು. ಈ ಹಾಡುಗಳ ಹಿನ್ನೆಲೆಯಲ್ಲಿ ಹಾಲಕ್ಕಿಗಳ ಸಂಸ್ಕೃತಿಯನ್ನು ಪರಿಚಯಿಸುವ ಪುಟ್ಟ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

## ೨. ಕುಣಿತ

### ೧. ಹಾಲಕ್ಕಿ ಒಕ್ಕಲಿಗರ ಕುಣಿತಗಳು :

ಬೇಟೆಗಾಗಿ ಕಾಡಿನಲ್ಲಿ ಅಲೆಯುವ ಹಾಲಕ್ಕಿ ಒಕ್ಕಲಿಗರ ಮನಸ್ಸನ್ನು, ಕಾಡಿನ ಗಿಡಬಳ್ಳಿಗಳ ಬಳುಕು, ಖಗ ಮೃಗಗಳ ಸ್ವಚ್ಛಂದ ಕುಣಿತ ಸೆರೆಹಿಡಿದಿರಬೇಕು. ಬೇಟೆಯಾಟದಿಂದ ದೊರೆತ ಮಾಂಸ, ಬೇಸಾಯದಿಂದ ಕಣಜ ತುಂಬಿದ ಧಾನ್ಯ ಅವರ ಹಿಗ್ಗಿಗೆ ಕೋಡು ಮೂಡಿಸಿರಬೇಕು. ಅವರು ತಮ್ಮ ಆನಂದವನ್ನು ಸುತ್ತು ಮುತ್ತಲಿನ ಪ್ರಕೃತಿಯನ್ನನುಕರಿಸಿ, ಕುಣಿತದ ಮೂಲಕ ಅಭಿ ವ್ಯಕ್ತಿಗೊಳಿಸಿದರು. ಇವರ ಕುಣಿತ ಸರಳ ಆದರೆ ಆಕರ್ಷಕ. ಕುಣಿತ ದಲ್ಲಿ ಉತ್ಸಾಹ, ಆವೇಶಗಳು ಹೆಚ್ಚು. ಇವರ ಭಾವಪ್ರಕಾಶನ ಮೊದಲು ಕುಣಿತದ ಮೂಲಕ; ಆಮೇಲೆ ಕುಣಿತದಲ್ಲಿ ಹಾಡು ಬೆರೆತುಕೊಂಡಂತಿದೆ. ಕುಣಿತದ ಹಾಡುಗಳಲ್ಲಿ ಅರ್ಥ ಗೌಣ, ಕುಣಿತಕ್ಕೇ ವಿಶೇಷ ಪ್ರಾಧಾನ್ಯ.

ನೃತ್ಯವು ದೇವತೆ, ಭೂತ, ಪ್ರೇತಗಳಿಗೂ ಸಂತೋಷ ನೀಡುವುದೆಂಬ ನಂಬಿಕೆ ಕ್ರಮೇಣ ಇವರಲ್ಲಿ ಬೆಳೆದಂತಿದೆ. ಹೀಗಾಗಿ ಇವರಲ್ಲಿ ಅನಿಷ್ಟ ನಿವಾರಣೆ ರೋಗ ಚಿಕಿತ್ಸೆ ದೇವರ ಕೃಪಾರ್ಜ ನೆಗೆಲ್ಲಾ ಕುಣಿತವನ್ನು ಬಳಸುವ ರೂಢಿ ಬೆಳೆದುಕೊಂಡಿದೆ.

ಬಹುದೇವತಾರಾಧಕರಾದ ಹಾಲಕ್ಕಿಗಳು ಬೇರೆ ಬೇರೆ ಕುಣಿತಗಳನ್ನು, ಬೇರೆ ಬೇರೆ ದೇವತೆಗಳ, ಸಂತೃಪ್ತಿಗಾಗಿ ಹಾಡಿ ಕುಣಿದರು. ಈ ನೃತ್ಯ ಸೇವೆಯೇ ಅವರು ದೇವತೆಗಳಿಗೆ ಸಮ ರ್ಪಿಸುವ ಪೂಜೆ, ಅವರ ಕುಣಿತ ಮನೋರಂಜನೆಗಾಗಿ ಅಲ್ಲ;

ಆತ್ಮಶುದ್ಧಿಗೆ. ಆರಾಧನೆಯು ಪನ್ನೀರಿನಲ್ಲಿ ಮಿಂದೆದ್ದ ಅವರ ನೃತ್ಯಗಳು, ದೈವಿಕ ಶ್ರದ್ಧೆಯ ಪರಿಮಳವನ್ನು ಹರಡುವಲ್ಲಿ ತಮ್ಮ ಸಾರ್ಥಕತೆಯನ್ನು ಪಡೆಯುತ್ತವೆ. ತಮ್ಮ ಕುಣಿತಗಳ ಪಾವಿತ್ರ್ಯವನ್ನು ಕಾಪಾಡಿಕೊಳ್ಳಲು ಅವನ್ನು ಧಾರ್ಮಿಕ ವಿಧಿಯನ್ನಾಗಿ ಮಾಡಿಕೊಂಡು ಪ್ರದರ್ಶಿಸಿದರು. ಯಾವುದೇ ಕುಣಿತ ಹಾಗೂ ಅದಕ್ಕೆ ಸಂಬಂಧಿಸಿದ ಹಾಡುಗಳನ್ನು ಯಾವ ಸಂದರ್ಭದಲ್ಲಿ ಬೇಕಾದರೂ ಹಾಡಿ ಕುಣಿಯಬಹುದಾದರೂ ಇಂತಹ ಸಂದರ್ಭದಲ್ಲಿ ಇಂತಹ ಕುಣಿತ ಇಂತಹ ಹಾಡು ಎಂದು ಕೆಲವೊಂದು ನಿರ್ಬಂಧ ಹಾಕಿ, ಕಲೆಗಳ ಅಗ್ಗದ ಪ್ರದರ್ಶನವನ್ನು ನಿಷೇಧಿಸಿದರು. ಹೀಗಾಗಿ ಒಂದು ಕಲೆ ಎಷ್ಟೇ ಜನಪ್ರಿಯವಾದರೂ, ಅದನ್ನು ಬೇಕೆಂದಾಗ ಪ್ರದರ್ಶಿಸಲಾಗದು. ಆಯಾ ಕಲಾ ಪ್ರದರ್ಶನಕ್ಕಾಗಿ ಮೀಸಲಾದ ದಿನ ಬರಬೇಕು. ಹೀಗಾಗಿ ಸುಗ್ಗಿಯ ಕೋಲಾಟ, ಬೆದ್ರುಂಡೆ, ತಾರ್ಲೆ ಮುಂತಾದ ಕುಣಿತಗಳು ನಮಗೆ ಬೇಕಾದಾಗ ನೋಡಸಿಗವು. ಈ ಕುಣಿತಗಳು ನಿರ್ದಿಷ್ಟ ವೇಳೆಯಲ್ಲಿ ನಿರ್ದಿಷ್ಟ ಉದ್ದೇಶಗಳಿಗಾಗಿ ಪ್ರದರ್ಶಿತವಾಗುವವು.

ಕುಣಿತದಿಂದ ಸಸ್ಯಾದಿಗಳು ಮೋದಗೊಳ್ಳುತ್ತವೆ: ಕ್ಷಾಮ ಡಾಮರಗಳು ಕಾಲ್ಕೀಳುತ್ತವೆ; ಫಲ ಸಮೃದ್ಧಿಯಾಗುತ್ತದೆ; ಬೇಟೆ ಫಲಪ್ರದವಾಗುತ್ತದೆ ಎಂಬ ನಂಬಿಕೆ ಇವರದು. ಅದಕ್ಕಾಗಿಯೇ ಬಿತ್ತುವಾಗ ಸಸಿ ನೆಡುವಾಗ, ಬೆಳೆ ತೊನೆಯುವಾಗ, ಧಾನ್ಯ ಮನೆಯಲ್ಲಿ ತುಂಬಿದಾಗ, ಉತ್ಸವ ಏರ್ಪಡಿಸಿ ಇವರು ಹಾಡಿ ಕುಣಿಯುತ್ತಾರೆ.

### ಅ. ಸುಗ್ಗಿಯ ಕುಣಿತ :

ಹಾಲಕ್ಕಿ ಒಕ್ಕಲಿಗರ ಸುಗ್ಗಿಯ ಕುಣಿತ ಕನ್ನಡ ನಾಡಿಗೇ ಕಲಶಪ್ರಾಯವಾದ ಕುಣಿತ. ವಿಕಸಿತ ಪ್ರಕೃತಿಯ ಜಂಗಮ

ರೂಪವಾಗಿ ಈ ಕುಣಿತ ಹೊಮ್ಮಿದಂತಿದೆ. "ಸುಗ್ಗಿಯ ಮಕ್ಕಳು" ಬಣ್ಣ ಬಣ್ಣದ ಉಡುಗೆ ತೊಟ್ಟು. ತಲೆಗೆ ತುರಾಯಿ ಕಟ್ಟಿಕೊಂಡು, ಕೈಯಲ್ಲಿ ಕೋಲು ಇಲ್ಲವೆ ಹೀಲಿಕುಂಚ-ಕೋಲು ಹಿಡಿದು ಕುಣಿಯುತ್ತಾರೆ. ಸುಗ್ಗಿಯ ಮೇಳದವರ ತುರಾಯಿವೇಷ, ಪಗಡೆ ವೇಷ, ಕರಡಿವೇಷ, 'ಹಗಣ'ವೇಷ, ಮರಕಾಲು ಕುಣಿತ, ಮೊದಲಾದುವೆಲ್ಲ ಭಿನ್ನ ಭಿನ್ನ ರುಚಿಯವರಿಗೆ ಭಿನ್ನ ಭಿನ್ನ ರಂಜನೆ ನೀಡುವಲ್ಲಿ ನೆರವಾಗುತ್ತವೆ.

ಸುಗ್ಗಿಯ ಮೇಳ ಊರ ಮೇಲೆ ಕುಣಿಯಲು ಹೊರಡುವುದು ಫಾಲ್ಗುಣ ಶುದ್ಧ ದಶಮಿಯೆಂದು ಮೇಳ. ಕರಿದೇವರ ಕಳದಿಂದ ಹೊರಡುವ ವಾಡಿಕೆ. ಆಗ ಮಾದೇವರಾಯನ ಹಾಡು ಹಾಡುವರು :

ಸೊ-ಮಿ ಹುಟ್ಟಾಕಿನ[೧] ಮೊದಲೆಯೆ
ಭೂಮಿ ಹುಟ್ಟಾಕಿನ ಮೊದಲೆಯೆ
ಸ್ವಾಮಿ ಮಾದೇವರಾಯ ಹುಟ್ಟಿ ಬಂದಾನೆ ಕೋಲೆ.
ಹಿಡ್ವೇಲಂದ್ರೆ ಮರ್ವೇಯಿಲ್ಲ
ತಡ್ವೇಲಂದ್ರೆ ಮರ್ವೇಯಿಲ್ಲ
ಅಂತರಳಿ[೨] ಮೆ–ನೆ ಆಡೂತಯ್ದಾನೊ ಮಾದೇವರಾಯ.

ಈ ಹಾಡಿನಲ್ಲಿ ಸೃಷ್ಟಿಯ ಹುಟ್ಟು, ದೇವತೆಗಳು, ಜೀವಕೋಟಿ ಹಾಗೂ ಹಾಲಕ್ಕಿಗಳ ಹುಟ್ಟಿನ ಅದ್ಭುತ ರಮ್ಯ ವರ್ಣನೆ ಬರುತ್ತದೆ. ಈ ಹಾಡಿನ ಎರಡು ಮೂರು ಪಾಠಗಳು ಲಭ್ಯವಿವೆ. ಮಾದೇವರಾಯನು ಪಾರಿವಾಳದ ಮೊಟ್ಟೆಯಿಂದ ಸೃಷ್ಟಿ ನಿರ್ಮಾಣ ಮಾಡಿದ ಕತೆ, ತುಂಬಾ ಸೊಗಸಾಗಿದೆ : ಮೊಟ್ಟೆಯ ಬೆಳ್ಳಗಿನ ಲೋಳೆಯಿಂದ ಸಮುದ್ರ, ಕೆಂಪು ಲೋಳೆಯಿಂದ ಭೂಮಿ, ಮೇಲಿನ ಕವಚದಿಂದ ಆಕಾಶವಾಯಿತಂತೆ. ಈ ಜಾನಪದ ಪ್ರಜ್ಞೆ

೧. ಹುಟ್ಟುವ
೨. ಅಂತರಾಳ

ಯಂತೆ ಈ ಬ್ರಹ್ಮಾಂಡವಾದದ್ದು ಅಂಡದಿಂದಲೇ; ಆದರೆ ಅದು ಬ್ರಹ್ಮನ ಅಂಡವಲ್ಲ ಪಾರಿವಾಳದ ಅಂಡ![೩]

ಭೂಮಿ ಹುಟ್ಟುವಾಗ ಮೆತ್ತಗಿತ್ತಂತೆ :
"ಹೆದರಲು ಬೇಡ ಭೂಮಿ। ನೆಡಗಲು ಬೇಡ ಭೂಮಿ
ಕಲ್ಲು ಕಾಣಾರಾ ಬಲುಮಿ।ಕೊಡ್ತೇನೆ ಬೂಮಿ ತಾಯೆ"

ಎಂದು ಮಾದೇವರಾಯ ಭೂಮಿಗೆ ಕಲ್ಲು ಕಾಣಾರ ಗಟ್ಟಿತನವನ್ನು ಕೊಡುವನಂತೆ. ಇನ್ನೊಂದು ಪಾಠದಲ್ಲಿ ಭೂಮಿ ಮೆತ್ತಗಿದ್ದ ಅಂಶ ತುಂಬಾ ಆಲಂಕಾರಿಕವಾಗಿದೆ :

ಪಶೀಮಕ್ಕೇ[೪] ನೆತ್ತಿಯೇ ಅಳಿದಂಗ್[೫]
ಆಳದಾವಲೋ ಈವಾಲೇ[೬] ಬೂಮಿ
ಈ ಬೂಮಿಯಾ ಕಲ್ಲೇ ಬಲೆನಿಲ್ಲೋ[೭]

ಪಸುಮಕ್ಕಳ ನೆತ್ತಿಯಂತೆ ಈ ಭೂಮಿ ಯಾಕೆ ಗಟ್ಟಿಗೊಳ್ಳಲಿಲ್ಲ? ಎಂದು ಮಾದೇವರಾಯನಿಗೆ ಚಿಂತೆ. ಇದಕ್ಕೆ ಕಾರಣ ಹೊಲತಿಯ ತಪಸ್ಸೆಂದರಿತ ಮಾದೇವರಾಯ, ಅವಳನ್ನು ಕೊಲ್ಲಿಸಿ, ಅವಳ ದೇಹ ವಿಭಾಗದಿಂದ, ಪ್ರಪಂಚದ ಒಂದೊಂದು ಜಾತಿಯನ್ನು ಪಡೆದ ನೆಂದು ಈ ಹಾಡು ತಿಳಿಸುತ್ತದೆ. ಬಲಿಯಿಂದಲೇ ಹೊಸ ಸೃಷ್ಟಿಯ ಆವಿಷ್ಕಾರವೆಂಬ ನಂಬಿಕೆಯ ಹಿನ್ನೆಲೆಯಲ್ಲಿ ಈ ಕಥೆ ಬೆಳೆದುಕೊಂಡಂ ತಿದೆ. ನರಬಲಿಯಿಂದ, ಸತ್ತ ವ್ಯಕ್ತಿಯ ಚೈತನ್ಯ, ಕೊಂದವನಿಗೆ ಬರುತ್ತದೆಂಬ ನಂಬಿಕೆ ಆದಿವಾಸಿಗಳಿಗೆ. ಮಾದೇವರಾಯ ಹೊಲತಿ ಯನ್ನು ಕೊಂದು, ಅವಳ ರಕ್ತ ತರ್ಪಣೆಯಿಂದ ಭೂಮಿಯನ್ನು

೩. ಇನ್ನೊಂದು ಪಾಠದಲ್ಲಿ ಅಂಗುಜನ ಹಕ್ಕಿಯ ಅಂಡವೆಂದಿದೆ.
೪. ಪಸು ಮಕ್ಕಳು. ೫. ಮೆತ್ತಗೆ, ಆಕ್ಕಿದಂತೆ. ೬. ಈ
೭. ಗಟ್ಟಿಯಾಗಲಿಲ್ಲ.

ಗಟ್ಟಿಗೊಳಿಸಿದ; ತಾನೂ ಸತ್ವ ಪಡೆದ. ತಪೋನಿಷ್ಠ ಹೊಲತಿಯ ಅಂಗಾಂಗಗಳ ಸತ್ವದಿಂದ ಬೇರೆ ಬೇರೆ ಜಾತಿಯ ಮಾನವರನ್ನು ಪಡೆದ. ಮಾದೇವರಾಯ ಗೆಯ್ದ ನರಮೇಧ ಯಜ್ಞದ ಫಲವೇ ಈ ಮಾನವ ಕುಲವೆಂದು ತೋರುತ್ತದೆ. ಈ ಪ್ರಪಂಚದ ಆದಿವಾಸಿಗಳು ಹೊಲೆಯರೆನ್ನುವ ಅಂಶವನ್ನು ಈ ಕಥೆ ಧ್ವನಿಪೂರ್ಣವಾಗಿ ಅನುರಣಿಸುತ್ತದೆ. ಹೊಲೆಯರ ಮಾರಣ ಹೋಮದಿಂದಲೇ ಉಳಿದ ಮಾನವ ವರ್ಗ ಚೈತನ್ಯ ಪಡೆದಂತಿದೆ. ಅಥವಾ ಒಂದು ಕಾಲದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಪ್ರಬಲ ರಾಗಿದ್ದ ಹೊಲೆಯರನ್ನು ಓಡಿಸಿ ಇತರರು ಈ ಜಿಲ್ಲೆಯನ್ನು ಆಕ್ರಮಿಸಿದ ಸಂಗತಿಯನ್ನು ಈ ಹಾಡು ಸಾಂಕೇತಿಕವಾಗಿ ಧ್ವನಿಸು ತ್ತಿರಬಹುದೆ?

ಈ ಹಾಡಿನ ಇನ್ನೊಂದು ಪಾಠದಲ್ಲಿ ಸೃಷ್ಟಿಯ ಹುಟ್ಟು ಹಾಗೂ ಜೀವಕೋಟಿಯ ನಿರ್ಮಾಣದಷ್ಟಕ್ಕೇ ಕಥೆ ಮುಗಿಯದೆ, ಮಾದೇವರಾಯನು ಹಾಲಿನ ಕೆರೆಯಲ್ಲಿ ಹಾಲಕ್ಕಿಗಳನ್ನು ಪಡೆದು, ಅವರಿಗೆ ಕೋಲಾಟ 'ವರವಾಗ್ಲಿ' ಎಂದು ಹರಸಿದ ಕಥೆ ಬರುತ್ತದೆ.

ಕರಿದೇವರ ಕಳದಲ್ಲಿ ಕೋಲಾಟ ಮುಗಿದ ಮೇಲೆ ಸುಗ್ಗಿಯ ಮೇಳ, ಇನ್ನಿತರ ಕಡೆಗೆ ಕೋಲಾಟವಾಡಲು ಹೋಗುತ್ತದೆ.

ಸುಗ್ಗಿಯ ಕೋಲಾಟಕ್ಕೆ ಉದ್ದುದ್ದ ಕಥಾನಕಗಳನ್ನು ಬಳ ಸುವುದು ಕ್ವಚಿತ್ತ; ಏಳಿಯ ರೂಪದ ಚಿಕ್ಕ ದ್ವಿಪದಿಗಳ ಬಳಕೆಯೇ ಹೆಚ್ಚು :

ಕೋಲು ಕೋಲೆನ್ನ ಕೋಲೆ–ರನ್ನದಾ
ಕೋಲು ಕೋಲೆನ್ನ ಕೋಲೆ।
ಕೋಲು ಆಟವು ಚೆಂದ ಕಾಳೆಯ ದನಿ ಚೆಂದ
ಶೂಳೆಯ[೮] ಕೊಣತಾ ಬಲುಚೆಂದ।
ಗೆಜ್ಜೆಯಾ ಕೋಲೂ ಕೋಲೆನ್ನ ಕೋಲೆ

೮. ಸೂಳೆಯ

ಬಾಳೆಯು ಕೊನೆಚೆಂದ ಶೂಳೆಯು ನುಡಿಚೆಂದ
ಗೋಳಾಡುತಿರುವಾ ಚೊಚ್ ಚೆಂದ|
ಹವಳದಾ ಕೋಲು ಕೋಲೆನ್ನ ಕೋಲೆ.

ಚಮತ್ಕಾರವಾದ ರೀತಿಯಲ್ಲಿ ಮಾತಿಗೆ ಮಾತು ಜೋಡಿಸಿ, ಏಕಾವಳಿಯನ್ನು ಹೆಣೆದು, ಕೋಲುಪದಕ್ಕೆ ಅಳವಡಿಸುವುದಿದೆ :

ತಂದೇನ ತಾನ ತಂದೆನ್ನ
ತಂದೆನ್ನ ತಾನ ತಾನ
ಕಣಪಿಣಿಯೆಂತಯೆಲಿಯ[೧೦] ಹಿಡಿಯಲಿಕ್ಕೆ
ಗಾಜಗಣ್ಣಿನ ಬೆಕ್ಕೆ ಬಂತು! ತಂದೇನ . . .
ಗಾಜಗಣ್ಣಿನ ಬೆಕ್ಕೆ ಹಿಡಿಯಲಿಕ್ಕೆ
ಕೆಂದನೆಂಬ ನಾಯಿ ಬಂತು| ತಂದೇನ . . .
ಕೆಂದನೆಂಬ ನಾಯಿ ಹಿಡಿಯಲಿಕ್ಕೆ
ಪಟ್ಟೆಯೆಂಬ ಹುಲಿಯೇ ಬಂತು| ತಂದೇನ . . .
ಪಟ್ಟೆಯೆಂಬ ಹುಲಿಯೇ ಹೊಡಿಯಲಿಕ್ಕೆ
ಬೂಚುಗಟ್ಟಿದ ಕೋವಿ ಬಂತು| ತಂದೇನ . . .

ಕೋಲಾಟದಲ್ಲಿ ಹೂವಿನಕೋಲು, ರನ್ನದಕೋಲು, ಹವಳದಕೋಲು, ಚಿನ್ನದಕೋಲು, ಬೆಳ್ಳಿಯ ಕೋಲು. ಹೀಗೆ ಹತ್ತಾರು ಬಗೆಯ ಕೋಲಾಟಗಳಿವೆ. ವಿಭಿನ್ನ ತಾಳಲಯಕ್ಕೆ ತಕ್ಕಂತೆ ಕೋಲಾಟದಲ್ಲಿಯೂ ವೈವಿಧ್ಯವಿದೆ.

ಸುಗ್ಗಿಯ ಮೇಳದಲ್ಲಿ ಕೋಲು ಮೇಳ ಮತ್ತು ಕುಂಚನ ಮೇಳಗಳೆಂಬ ಎರಡು ಬಗೆಯ ಮೇಳಗಳಿವೆ. ಕೋಲು ಮೇಳ ದವರು ಎರಡೂ ಕೈಯಲ್ಲಿ ಕೋಲು ಹಿಡಿದು ಕೋಲಾಟವಾಡು

---

೯. ಸೊಸೆ ೧೦. ಇಲಿಯನ್ನು

ತ್ತಾರೆ. ಕುಂಚನ ಮೇಳದವರು, ಎಡಗೈಯಲ್ಲಿ ನವಿಲುಗರಿಯ ಕುಂಚ, ಬಲಗೈಯಲ್ಲಿ ಚಿಕ್ಕಕೋಲು ಇಲ್ಲವೆ ಕರವಸ್ತ್ರ ಹಿಡಿದು 'ಚೋಹೋಯರ್' ಎಂದು ಕುಣಿಯುತ್ತಾರೆ. ಕೋಲು ಮೇಳದ ಕುಣಿತದ ಸೊಗಸು ಕುಂಚನ ಮೇಳಕ್ಕಿಲ್ಲ. ಆದರೂ ಕುಂಚನ ಮೇಳದ ಕುಣಿತವೂ ಆಕರ್ಷಕ. ಬೆಳಂಬಾರದ ಕುಂಚನ ಮೇಳದ ಸೊಗಸಿಗೆ ಮಾರು ಹೋದ ಬ್ರಿಟಿಷ ದೊರೆ, ಅಂಕೋಲೆಯ ತಾಲೂಕು ಕಚೇರಿಯ ಮುಂದೆ ಸುಗ್ಗಿ ಕುಣಿಯಲು ಶಿಫಾರಸು ಮಾಡಿ ಹೋದ. ಈ ಪರಂಪರೆ ಇಂದೂ ಚಾಲ್ತಿಯಲ್ಲಿದೆ.

ಹೋಳಿ ಹುಣ್ಣಿಮೆಯ ರಾತ್ರಿ. ಕಾಮದಹನದ ಪೂರ್ವದಲ್ಲಿ ಸುಗ್ಗಿಯ ವಸಂತ ವೈಭವ ಕೊನೆಗೊಳ್ಳುತ್ತದೆ. ಸುಗ್ಗಿಯ ಮುಕ್ತಾಯದ ವೇಳೆಗೆ 'ಕಮಿ' (ಕವಿ?) ಪದ ಹೇಳುತ್ತಾರೆ. ಕಮಿ ಪದವು ಸುಗ್ಗಿಯ ಶಾಸ್ತ್ರವನ್ನು ವಿವರವಾಗಿ ಹೇಳುತ್ತದೆ. ಕಮಿ ಪದದಲ್ಲಿ ಎರಡು ಬಗೆ: ೧) ಕೋಲ್ ಕಮಿ ೨) ಸೀತಾಕಮಿ. ಕೆಲ ವೆಡೆ ಇದನ್ನು ೧) ಪಾಂಡೋರ್ ಕಮಿ ೨) ಕವ್ಲರ್ ಕಮಿ ಎಂದೂ ಕರೆಯುತ್ತಾರೆ.

ಉತ್ತರ ಕನ್ನಡ ಜಿಲ್ಲೆಯ ಸುಗ್ಗಿಯ ಕೋಲಾಟದ ಕಲಾತ್ಮಕತೆ, ಭವ್ಯತೆ, ಕನ್ನಡನಾಡಿನ ಇನ್ನಿತರ ಕಡೆಯ ಕೋಲಾಟಕ್ಕಿಲ್ಲ. ಈ ಕಲೆಗೆ ಯೋಗ್ಯ ಪ್ರೋತ್ಸಾಹವಿಲ್ಲದೆ, ಇದರ ಕಲಾತ್ಮಕತೆ ಮಸುಳಿಸುತ್ತಲಿದೆ. ಇದಕ್ಕೆ ಪ್ರೋತ್ಸಾಹ ಸಿಕ್ಕಲ್ಲಿ ಈ ಕಲೆ ಯಕ್ಷಗಾನದಂತೆ ಅಂತಾರಾಷ್ಟ್ರೀಯ ಖ್ಯಾತಿಗಳಿಸಿ, ಕರ್ನಾಟಕದ ಹೆಮ್ಮೆಯ ಕಲೆಯಾಗಿ ಮೆರೆಯಬಹುದು.

## ಆ. ತಾರ್ಲೆ (ದುಮ್ ಸಾಯ್ಲೆ) :

ಬಿತ್ತಿದ ಬೀಜವನ್ನು ಮೊಳಕೆಯೊಡಿಸಲು, ಮಳೆ ಬರದೆ ಕ್ಷಾಮ ಶಂಕೆಯಾದಾಗ, ಹಾಲಕ್ಕಿ ಒಕ್ಕಲಿಗರ ಹೆಣ್ಣುಮಕ್ಕಳು

ಬೈಲಲ್ಲಿ ನೆರೆದು ಕೈಗೆಂಜು ಹಾಕಿಕೊಂಡು, ಮಂಡಲಾಕಾರದಲ್ಲಿ ನಿಂತು, ಹಿಂದೆ ಮುಂದೆ ಬಾಗಿ ಬಳುಕಿ, ಹಾಡುತ್ತಾ ಕುಣಿಯುತ್ತಾರೆ. ಆಗ 'ತಾರ್ಲೆ' ಎಂಬ ಪಲ್ಲವಿಯನ್ನು ಹೆಜ್ಜೆ ಹೆಜ್ಜೆಗೂ ಅನ್ನುವುದ ರಿಂದ ಇದು ತಾರ್ಲೆ ಕುಣಿತವಾಯಿತು. ಇನ್ನು ಕೆಲವಡೆ ತಾರ್ಲೆಗೆ ಬದಲಾಗಿ 'ದುಮ್‌ಸಾಯ್ಲೋ' ಪಲ್ಲವಿಯನ್ನು ಹೇಳುವುದರಿಂದ ಇದು 'ದುಮ್‌ಸಾಯ್ಲೋ' ಕುಣಿತವಾಯಿತು. ಹೀಗೆ ಹಾಡಿ ಕುಣಿದರೆ ದೇವತೆಗಳು ಸಂತೃಪ್ತಿಗೊಂಡು, ಮಳೆ ಬೆಳೆಗಳನ್ನು ದಯಪಾಲಿಸುವರೆಂಬ ನಂಬಿಕೆ ಇವರದು ಕೆಲವಡೆ ಹಿಂದಕ್ಕೆ ಹೆಂಗಸರು ಗುಡ್ಡಕ್ಕೆ ಹೋಗಿ ಬೆತ್ತಲೆಯಾಗಿ ತಾರ್ಲೆ ಕುಣಿ ಯುತ್ತಿದ್ದರಂತೆ. ಆಗ ಆಕಾಶರಾಯ ಇವರ ನಗ್ನತೆಗೆ ಪುಲಕಿತ ನಾಗಿ ಮಳೆತರುತ್ತಿದ್ದನಂತೆ. ಇಂದು ಈ ಪದ್ಧತಿ ಕಣ್ಮರೆ ಯಾದಂತಿದೆ.

ಮಳೆ ತರಿಸಲು (ತರಲ್ > ತಾರಲ್ > ತಾರ್ಲೆ) ವರುಣ ದೇವತೆಯನ್ನು ಕುರಿತು ಸಲ್ಲಿಸುವ ಪ್ರಾರ್ಥನಾಕುಣಿತ ಇದಾಗಿರ ಬೇಕು. ಆದರೆ ಇಂದಿನ ಕುಣಿತದ ಹಾಡಿನಲ್ಲಿ ಅಂತಹ ಪ್ರಾರ್ಥನೆ ಸುಳಿವಿಲ್ಲ. ಆದರೆ ಕೆಲವಡೆ ಈ ಕುಣಿತ ಕುಣಿಯುವ ಕಾಲಕ್ಕೆ ಒಂದು ವಿಶಿಷ್ಟ ಹಾಡನ್ನು ಹೇಳಿ, ಅಭಿನಯಿಸಿ ಕುಣಿಯುತ್ತಾರೆ. ಇದಕ್ಕೆ ಬೆದ್ರುಂಡೆ ಹಾಡೆಂದು ಕರೆಯುತ್ತಾರೆ.

**ಇ. ಬೆದ್ರುಂಡೆ :**

ಕುಣಿತ, ಸಂಭಾಷಣೆ, ಗೀತ, ಅಭಿನಯಗಳಿಂದ ಕೂಡಿದ ಅಪೂರ್ವವಾದ ಈ ಹಾಡನ್ನು, ಹಿಂದಕ್ಕೆ ರಾತ್ರಿ ಬೆಳಗಾಗುವ ವರೆಗೆ ಹಾಡುತ್ತಿದ್ದರಂತೆ. ಆದರೆ ಈಗ ಈ ಹಾಡಿನ ಸವಕಳಿರೂಪ ಮಾತ್ರ ಲಭ್ಯವಿದೆ. ಇದು ತಾರ್ಲೆಯಂತೆ ಮಳೆ ತರಿಸುವಾಗ

ಹೇಳುವ ಹಾಡಾದರೂ, ಹಾಡಿನ ಜೊತೆಗೆ ಸೇರಿದ ಕುಣಿತ ತಾರ್ಲೆಯಿಂದ ತುಸು ಭಿನ್ನವಾಗಿದ್ದು ಅಭಿನಯಕ್ಕೆ ಅವಕಾಶವಿದೆ: ಹಾಡನ್ನು ಹಾಡುವಾಗ ಎರಡು ಗುಂಪುಗಳಾಗಿ ಎದುರು ಬದುರು ಕುಳಿತು ಹಾಡುತ್ತಾರೆ. ಒಂದು ಗುಂಪು ಗಂಡಿನ ಪರ, ಇನ್ನೊಂದು ಹೆಣ್ಣಿನ ಪರ. ಒಮ್ಮೆ ಕುಳಿತು ಹಾಡುತ್ತಾರೆ. ಇನ್ನೊಮ್ಮೆ ನಿಂತು ಒಬ್ಬರ ಕೈಯನ್ನೊಬ್ಬರು ಹಿಡಿದು ಹಿಂಜೋಲಿ ಮುಂಜೋ ಹೊಡೆಯುತ್ತ ಹಾಡಿ ಕುಣಿಯುತ್ತಾರೆ. ಒಮ್ಮೊಮ್ಮೆ ಕುಣಿಯುವು ದನ್ನು ನಿಲ್ಲಿಸಿ ಒಬ್ಬರ ತಲೆಗೊಬ್ಬರು ತಲೆ ಜೋಡಿಸಿಕೊಂಡು ರಾಗ, ಎಳೆದು, ಜೋಡು ಹಕ್ಕಿ ಹಾಡಿದಂತೆ ಹಾಡುತಾರೆ. ಗಂಡಿನ ಪಂಗಡದವರು ಹೆಣ್ಣಿನ ಪಂಡಗದಿಂದ ಹೆಣ್ಣೊಂದನ್ನು ಎಳೆದು ಕೊಂಡು ಹೋಗುವುದು, ಕೂಡಿಕೆ-ಆಮೇಲೆ ಮದುವೆ ಇವೆಲ್ಲವನೂ ಅಭಿನಯಿಸಿ ಹಾಡಲಾಗವುದು. ಹಾಡು ಆರಂಭವಾಗುವುದು ಹೀಗೆ:

ಬೆದ್ರುಂಡೆ ಬೆದ್ರುಂಡೆ ಯಾರ್ ನೆಟ್ಟ್ರೆ ಬೆದ್ರುಂಡೆ
ನಾವೊಂದ್ ತಂದೊ ಹನ್ನೆಯ್ಡು ಎಮ್ಮೆ
ಕಾಚಾ[೧೧]ನೋಡು ಕರಿಯಾ[೧೨]ನೋಡು
ಬಾಲ್ಯಾ ಕಯ್ಯ್ಯಲ್ ಬೀಚಾ ನೋಡು
ಹಾದಿನೊಂದೋಗು ಮಗ್ವೇ
ಉಟ್ಟ್ಟಂದಿಲ್ಲ[೧೩] ನೆಟ್ಟ್ಟಂದಿಲ್ಲ[೧೪]
ಬಾಬಾಲಕ್ಕೀಯೇ ಬಾಬಾಲಕ್ಕೀಯೇ.

ಈ ಹಾಡು ಅಸ್ಪಷ್ಟವಾಗಿದೆ. 'ಬೆದ್ರುಂಡೆಗೆ' ಬದಲಾಗಿ 'ಬೆದ್ರುಂಡೆ 'ಬಿದ್ರಿಂಡ್' ಎಂಬ ಪಾಠಗಳೂ ಇವೆ. ಈ ಪದ ಬಿದಿರ ಹಿಂಡಿಗೆ ಸಂಬಂಧಿಸಿದ್ದಿರಬಹುದೆ? ಯಾಕಂದರೆ ಹಾಲಕ್ಕಿಯರ ಮದುವೆಯು

---

೧೧. ಕಾಸದು ೧೨. ಕರಿಯದು ೧೩. ಹುಟ್ಟಿದ್ದಿಲ್ಲ ೧೪. ನೆಟ್ಟದ್ದಿಲ್ಲ.

ಹಾಡಿನಲ್ಲಿ ಬಿದಿರ ಮೊಳಿಕೆ,ಹದಗಾಲದ ಸಂಕೇತವಾಗಿ ಬರುತ್ತದೆ[೧೫] 'ಕರಳೆ ಶೂತ್ರಕೆ' (ಬಿದಿರಿನ ಮೊಳಿಕೆ) ನೆರೆದು ಹಿಂಡಾಗುವುದು ಮಳೆ ಬಿದ್ದಮೇಲೆ. ಬಿದಿರಿನ ಮೊಳಿಕೆಯು ನೆರವಣಿಗೆ, ಸಮೃದ್ಧಿ ಸಂಕೇತವಾಗಿ ಹಾಡಿನಲ್ಲಿ ಬರುತ್ತದೆ. ಫಲ, ಸಮೃದ್ಧಿಗಾಗಿ ಬಿದಿರನ್ನು ನೆಡುವ ಸಂಪ್ರದಾಯ ಹಾಲಕ್ಕಿಗಳಲ್ಲಿದ್ದಿರಬಹುದೆ?[೧೬] ಅಥವಾ ಬೆದೆ + ಉಂಡೆ = ಬೆದುಂಡೆ > ಬೆದ್ರುಂಡೆ ಆಯ್ತೆ? ಇಲ್ಲವೆ ಬೆದೆ + ಅಂಡೆ = ಬೆದಂಡೆ > ಬೆದ್ರುಂಡೆ ಆಗಿರಬಹುದೆ? ಪದ್ಯಕ್ಕೆ ಹೀಗೆ ಅರ್ಥಕೊಡಬಹುದೇನೋ : ಪದಗಾಲದಲ್ಲಿ ಬೀಜ ನೆಟ್ಟಾಯ್ತು ಫಲಿಸಲಿಲ್ಲ. ಹನ್ನೆರಡೆಮ್ಮೆ ತಂದಾಯ್ತು ಆದರೇನು ಕರೆಯಲಿಲ್ಲ ಕಾಸಲಿಲ್ಲ. ಹುಟ್ಟಿದ್ದೂ ಇಲ್ಲ. ನೆಟ್ಟದ್ದೂ ಇಲ್ಲ. ಮಳೆಯೇ ಬಾ, ಸಮೃದ್ಧ ಬೆಳೆಯೇ ಬಾ. ಬಾಬಾಲಕ್ಕಿ(ಬಾಬಾ + ಹಕ್ಕಿ) ಎಂದರೆ ಬೆಳ್ಳಕ್ಕಿಗೆ ಕರೆಯಾಗಿರಬೇಕು. ಯಾಕಂದರೆ ಮಾನ್ಸೂನ್ ಮಳೆಯನ್ನು ಬೆಳ್ಳಕ್ಕಿಗಳು ತರುತ್ತವೆಂಬ ನಂಬಿಕೆ ಜಾನಪದರದು. ಆ ಪಕ್ಕಿ ಕೊಲಂಬೋ ಬದಿಯಿಂದ ಹಾರಿ ಬಂದರೆ ಮಳೆಯಾಗುತ್ತದೆಯಂತೆ. ಆ ಹಕ್ಕಿಯನ್ನು ಸ್ವಾಗತಿಸಿದರೆ, ಮಳೆರಾಯನನ್ನು ಸ್ವಾಗತಿಸಿದಂತೆ. ಬಾಬಾಲಕ್ಕಿ (ಬಾಬಾ + ಅಕ್ಕಿ) ಎಂದು ಸಮೃದ್ಧ ಮಳೆಯನ್ನು ಸ್ವಾಗತಿಸಿದ್ದರೂ ಸ್ವಾಗತಿಸಿರಬಹುದು.

---

೧೫. ಮೊಳಗಾಲ ಮೊಳಹೊಯ್ದ್ದೆ ಬೆಟ್ಟಕೆ ಬೇರೆದ್ದವೊ
'ಕರಳೆ ಶೂತ್ರಕೆ ನೆರ್ದವೊ'। ಲಪ್ಪನೆ
ಮಗಿದೀರೊ ನೆರ್ದ್ದಾರೆ ಮದವೀಗೊ।

೧೬. ಸಂಸ್ಕೃತದಲ್ಲಿ 'ವಂಶ' (ಬಿದಿರು) ವಂಶ ಸಮೃದ್ಧಿಯ ಸಂಕೇತವಂತೆ.
ಈ ಸೂಚನೆ ನೀಡಿದ ಶ್ರೀ ಗೌರೀಶ ಕಾಯ್ಕಿಣಿಯವರಿಗೆ ಋಣಿ.

ಚೊರ್[೧೭] ಹೂಂಗೀಗೇ ಚೊರ್ ಮುಚ್ಚಲಿ
ಹೀರ್[೧೮] ಹೂಂಗೀಗೇ ಹೀರ್ ಮುಚ್ಚಲಿ
ಗರ್ಗನ ಚೊಡಂಗಿ ಹೊನ್ ಬಾಚಿಂಗ
ಮುದ್ದೂ ಮಾಣಿಕದಾ ರವೆರತ್ನ

ಸೋರೆಯು ಹೂವಿಗೆ, ಕಾಯಾಗಲಿ, ಹೀರೆ ಹೂವಿಗೆ ಮಿಡಿ ಬಿಡಲಿ; ಗರ್ಗಕ್ಕೆ ಹೊನ್ನ ಬಾಸಿಂಗವಾಗಲಿ ಎಂಬಲ್ಲಿ ಫಲಸಮೃದ್ಧಿಯ ಹಾರೈಕೆಯಿದೆ.

ಹೋಗ್ ಹೋಗ್ ಗೊಂಡೆನಕ್ಕಲ್ಗೇ[೧೯]
ಬಾಬಾ ಪೆಂಡೆನಕ್ಕಲ್ಗೇ

ಇಂದೇ ನಮ್ಮ ನಿಯಲ್ ಆಚೆ ಕೇರಿ ಗಂಡಮಕ್ಕಳ್ ವಾಲಾಡೀರೇ.[೨೦] ಎಂದು ಹೆಣ್ಣಿನ ಪರವಾಗಿರುವ ಗುಂಪು ಹೇಳಿದಾಗ, ಗಂಡಿನ ಪರವಾಗಿರುವವರು, "'.... ಈಚೆಕೇರಿ ಹೆಣ್ಣುಮಕ್ಕಳ್ ವಾಲಾಡೀರೇ" ಎಂದು ಹಾಡಿ ಕುಣಿಯುತ್ತಾರೆ. ಆಮೇಲೆ ಗಂಡಿನ ಪರ ಗುಂಪಿನವರು, ಹೆಣ್ಣಿನ ಪರ ಗುಂಪಿನವರನ್ನು ಬೆನ್ನಟ್ಟುತ್ತಾರೆ. ಇದು ಹೆಣ್ಣನ್ನು ಬಲತ್ಕಾರವಾಗಿ ಓಡಿಸಿಕೊಂಡು ಹೋಗುವುದರ ಸಂಕೇತವಂತೆ.

ಕಗ್ಗಲ್ಲು ಗುಡಿಮೆ–ನೆ ಕಾಸಿ[೨೧] ನೆಡುವುದು ಕಂಡೆ
ಕಗ್ಗಲ್ಲು ನುಗ್ಗಿ ನುರೀದ್ಯೆವೆ। ನಮ್ಮನಿಯು
ಬೆಲ್ಲಾ[೨೨] ನಮ್ಮೆತ್ತು ಹೊಡುದೆಬ್ಬ[೨೩] । ನೆಂಟರೆ
ಹಾಸಿದರುಲ್ಲೆ ಚೊಗಚಿಂದೆ[೨೪]। ನೆಂಟರೆ
ವಾಲಾಡೆಮೆಂದೊ ಹೊಡೆಹುಲ್ಲು।

ಮೇಲಿನ ಸಾಲುಗಳು ಹೆಣ್ಣುಗಂಡುಗಳ ಮಿಲನವನ್ನು ಪ್ರತಿಮಾ ವಿಧಾನದಿಂದ ಹೇಳಿದಂತಿದೆ. ಗಂಡು ಹೆಣ್ಣುಗಳು ಹೊಲದಲ್ಲಿ

---

೧೭. ಸೋರೆ ೧೮. ಹೀರೆ ೧೯. ಗೊಂಡೆಯ ಹಕ್ಕಲಿಗೆ ೨೦. ಒಲಾಡು. ೨೧. ಲಿಂಗ ಸಂಕೇತ ೨೨. ಬೆಳ್ಳ ೨೩. ಹೊಡೆದೇಳಿಸು ೨೪. ಸೊಗಸಿನಿಂದ

ಭೋಗಿಸಿದರೆ ಫಲಸಮೃದ್ಧಿಯೆಂಬ ನಂಬಿಕೆಯಿಂದ ಹೆಣ್ಣುಗಂಡು ಗಳ ಅಣುಕು ಕೂಟವನ್ನು ನಟಿಸುತ್ತಾರೆ. ಹೊಲ ಹೊಸದಾಗಿ ಹೂಡಿದಾಗ, ಸೇಗಿಲುಗೆರೆಗಳಲ್ಲಿ ಗಂಡಹೆಂಡಿರು ಸಂಭೋಗಿಸಿದರೆ ಬೆಳೆ ಹುಲುಸಾಗಿ ಬರುವುದೆಂಬ ನಂಬಿಕೆ ಹಲವೆಡೆಯಿದೆ.[೨೫] ಸೃಷ್ಟಿ ಸ್ಥಿತಿ ಮುಂದುವರಿಕೆಗೆ ಹೆಣ್ಣು ಗಂಡುಗಳ ಕೂಟ ಆವಶ್ಯಕ ಅದಕ್ಕಾಗಿಯೇ ಈ ಕೂಟದ ಆಟ ನಟಿಸಿ ಮಳೆ, ಬೆಳೆ ಸಮೃದ್ಧಿಯನ್ನು ಹಾರೈಸಿದರು.

ದೊಡ್ಡ ಮಳೆ ಹೊಯ್ಯಲಿ ದೊಡ್ಡ ಕೆರೆ ತುಂಬಲಿ
ದೊಡ್ಡ ದೊಡ್ಡೋರೀಗ್ ದೊರೆತನ। ಹೊಮರದಾ[೨೬]
ಹಾಲಲುಂಬರಿಗ್ ಮುಯಬಣ್ಣ[೨೭]।

ಮುಂದೆ ಇಬ್ಬರಿಗೆ ಹೆಣ್ಣು ಗಂಡಿನ ವೇಷ ತೊಡಿಸಿ ಅಣುಕು ಮದುವೆ ಮಾಡುತ್ತಾರೆ. ಹೆಣ್ಣು ಗೆದ್ದ ಗಂಡಿನ ಪಂಗಡ ದವರು ಹೇಳುತ್ತಾರೆ :

"ಚಿನ್ನಯಿಟ್ಟ ಹೆಣ್ಣು ನಾವು[೨೮] ಗೆದ್ರೋ"[೨೯]

ಹೆಣ್ಣಿನ ಪಂಗಡದವರು ಉತ್ತರಿಸುತ್ತಾರೆ:

ಗೆದ್ದರೆ ಗೆದ್ ಹೆಣ್ಣ ನಾವೂಕೊಡ್ತ್ಯೊ[೩೦] "

ಗಂಡಿನವರು:

ನೀವು ಕೊಡದಿದ್ರೆ ನಾವೂ ಬಿಡ್ತ್ಯೊ[೩೧]

ಹೆಣ್ಣಿನವರು :

ನೀವು ಬಿಡದಿದ್ರೆ ನಾವೂ ಕೊಡ್ತ್ಯೊ.

ಕೊನೆಗೆ ಹೆಣ್ಣನ್ನು ಎಳೆದುಕೊಂಡು ಹೋಗಿ ಹೆಣ್ಣು ಗಂಡುಗಳ ಜೋಡಿ ಮಾಡುವರು.

---

೨೫. A. H. Krappe: The Science of Folklore P. 288
೨೬. ಹೊಮರದಾ ೨೭. ಮೈಬಣ್ಣ
೨೮. ನಾವು ೨೯. ಗೆದ್ದೆವು ೩೦. ಕೊಡುವದಿಲ್ಲ ೩೧. ಬಿಡುವುದಿಲ್ಲ

ಈ ಹಾಡಿನಲ್ಲಿ ಸಮೃದ್ಧ ಬೆಳೆಯ ಹಾರೈಕೆಯಿದೆ. ಫಲೀಕರಣಕ್ಕೆ ಹೆಣ್ಣು ಗಂಡುಗಳು ನಕ್ಕು ನಲಿದು, ಕೂಡಿ ಹಾಡಿ ತಣಿಯಬೇಕು; ಕುಣಿದು ಕೂಡಬೇಕು. ಪ್ರಕೃತಿ ಬೆದೆಯುಂಡು ತಣಿಯಬೇಕು.

ಇದೇ ಹಾಡನ್ನು ಸಲ್ಪ ಬದಲಾವಣೆ ಮಾಡಿಕೊಂಡು ಕೃಷಿಸ್ವಾಮಿಯಾದ ಬಲೀಂದ್ರನ ಮುಂದೆ ಕೆಲವೆಡೆ ಹಾಡಿ ಕುಣಿಯುತ್ತಾರೆ.

## ೩. ಮನೋರಂಜನೆ

### ೧. ಯಕ್ಷಗಾನ ಬಯಲಾಟ :

ಜಾನಪದ ಕಲೆಯಾದ ಬಯಲಾಟದಲ್ಲಿ ಹಾಲಕ್ಕಿಗಳ ಆಸಕ್ತಿ ಕಡಿಮೆಯಿಲ್ಲ. ವಿಶೇಷ ಉತ್ಸವ, ಹಬ್ಬ ಹರಿದಿನದಂದು ಯಾವುದೋ ಒಂದು ಪ್ರಸಂಗವನ್ನು ತೆಗೆದುಕೊಂಡು ಆಟವಾಡುತ್ತಾರೆ. ಆಟಕ್ಕೆ ಹತ್ತಿಪ್ಪತ್ತು ದಿನ ಮುಂಚಿತವಾಗಿಯೇ ಬಲ್ಲವರಿಂದ ಕಲಿತು. ಕುಣಿತ, ಪದ, ಅರ್ಥಗಾರಿಕೆ ಎಲ್ಲದರಲ್ಲಿ ಪರಿಣತಿ ಸಾಧಿಸುತ್ತಾರೆ. ಆಮೇಲೆ ಕಲಾವಿದರೆಲ್ಲ ಸ್ವಂತ ಹಣ ಖರ್ಚುಮಾಡಿ, ಬಯಲಾಟ ಕುಣಿದು, ತಮ್ಮ ನೆರೆಹೊರೆಯುವರಿಗೆ ಪುಕ್ಕಟೆ ಮನೋರಂಜನೆಯನ್ನೊದಗಿಸುತ್ತಾರೆ. ಯಕ್ಷಗಾನದ ವೃತ್ತಿ ಕಲಾವಿದರಂತೆ, ಟಿಕೆಟ್ಟು ಇಟ್ಟು ಹಣಕ್ಕಾಗಿ ಆಟ ಮಾಡುವುದು ಇವರಿಗೆ ಗೊತ್ತಿಲ್ಲ.ಊರಿನ ಹತ್ತು ಮಂದಿ ಇವರ ಕಲೆಯನ್ನು ನೋಡಿ ಮೆಚ್ಚಿದರೆ ಸಾಕು ಅಷ್ಟೇ ಆನಂದ. ಇವರ ಬಯಲಾಟ, ವೃತ್ತಿ ಮೇಳದವರಂತೆ ಪರಿಷ್ಕೃತ ಪರಿಣತಿಯನ್ನು ಪಡೆದದ್ದಲ್ಲ. ಆದರೆ ಇದರಲ್ಲಿ ಜಾನಪದ ಅಂಶ ಜಾಸ್ತಿ.

### ೨. ಸಣ್ಣಾಟ:

ಗಟ್ಟದ ಮೇಲಿಂದ ವಲಸೆ ಬಂದಿರಬಹುದಾದ ಸಣ್ಣಾಟವೂ ಇವರಲ್ಲಿ ಜನಪ್ರಿಯವಾಗಿದೆ. ಧಾರವಾಡ, ಬೆಳಗಾಂವ ಮುಂತಾದ ಉತ್ತರ ಕರ್ನಾಟಕ ಪ್ರದೇಶಗಳಲ್ಲಿ ಪ್ರಚಲಿತವಿರುವ, ಸಂಗ್ಯಾ ಬಾಳ್ಯಾ ಆಟವನ್ನು ಆಟ ಬಲ್ಲವರಿಂದ ಅಭ್ಯಾಸಮಾಡಿ ಆಡುತ್ತಾರೆ. ಆಟದಲ್ಲಿ ಬಳಕೆಯಾದ ಗಟ್ಟದ ಮೇಲಿನ ಸಾಮಾಜಿಕ

ಉಪಭಾಷೆ ಮಾತ್ರ, ಸಾಕಷ್ಟು ಮಾರ್ಪಾಡಾಗಿದೆ. ಕಲಾವಿದರ ಸಂಭಾಷಣೆಯಲ್ಲಿ ಹಾಲಕ್ಕಿಯರ ಸಾಮಾಜಿಕ ಉಪಭಾಷೆಯು ಎದ್ದು ಕಾಣುತ್ತದೆ. ಇದೇ ಬಗೆಯ ಆಟಗಳಾದ ಗುಂಡುಬರ್ಮನ ಆಟ, ಕುಮಾರ ರಾಮನ ಆಟಗಳು ಪೂರ್ತಿಯಾಗಿ ಹಾಲಕ್ಕಿ ಒಕ್ಕಲಿಗರ ಸಾಮಾಜಿಕ ಉಪಭಾಷೆಯಲ್ಲಿಯೇ ಇವೆ. ಗುಂಡು ಬರ್ಮನ ಆಟದಲ್ಲಿಯ ಪದವೊಂದನ್ನು ಅವಲೋಕಿಸಿರಿ :

ಅಟ್ಟೊಂದು ಮಾತನ್ನು ಕೇಳ್ದಾನೋ ಇಸರೂಪ[೧]
ಕತ್ತುವಂತ ನಂದಾದೀಪ ಹೊಡೆದಾನೋ। ಇಸರೂಪ
ಕೊ–ಟೆಯ ಒಳಗಡೆ ನಡೆದಾನೋ ।

ಕೇಳಾಲೊ ಕೇಳಾಲೊ ಇಸರೂಪ ನೀಕೇಳೊ
ಬಾಗ್ಲಲ್ಲಿ ಜಾಲನಾಯಿ[೨] ಕಟ್ಟೆನೋ[೩]। ಗಣಪತಿ
ಮುಂದೆ ಹೋದರೆ ಮಯ್ಯಮೆನೆ ಬರುತೀದೆ।

ಗುಂಡುಬರ್ಮ, ಕುಮಾರರಾಮ, ಸೋಮಯ್ಯ ಭೀಮ ಯ್ಯನ ಆಟಗಳು ಕಥಾಸಂವಿಧಾನ, ಪಾತ್ರಪೋಷಣೆ, ಸಂಭಾಷಣಾ ಚಾತುರ್ಯ ಮುಂತಾದ ಅಂಶಗಳಲ್ಲಿ ಅಷ್ಟೊಂದು ಸತ್ವಪೂರ್ಣ ವಾಗಿಲ್ಲ. ಕೇವಲ ಕಥೆ ನೀರಸವಾಗಿ ಮುಂದುವರಿಯುತ್ತದೆ. ಆಟದ ಪದಬಂಧ ತೀರ ಶಿಥಿಲವಾಗಿದೆ; ಕಾವ್ಯ ಸತ್ಯವೂ ಕಡಿಮೆಯಾಗಿದೆ.

### ೩. ಹಗಣ :

ಬಯಲಾಟದ ಅತ್ಯಂತ ಪ್ರಾಚೀನ ರೂಪವಾದ 'ಪಗರಣ' ವು 'ಹಗಣ' ವಾಗಿ ಇಂದೂ ಹಾಲಕ್ಕಿಗಳಲ್ಲಿ ಪ್ರಚಲಿತವಿದೆ. ಹಗಣ ಮಾಡುವುದೆಂದರೆ ಹಾಲಕ್ಕಿ ಒಕ್ಕಲಿಗರಿಗೆ ಅತ್ಯಂತ ಪ್ರಿಯ. ಇದರಲ್ಲಿ

---

೧. ಒಂದು ಪಾತ್ರದ ಹೆಸರು—ವಿಶ್ವರೂಪ ೨. ಒಂದು ಜಾತಿಯ ನಾಯಿ.
೩. ಕಟ್ಟಿದ್ದಾನೆ.

ಅವರನ್ನು ಮೀರಿಸುವವರು ವಿರಳ. ಸುಗ್ಗಿ ಹಬ್ಬ, ಯುಗಾದಿ ಹಬ್ಬ, ಬಂಡಿ ಹಬ್ಬಗಳಲ್ಲಿ ಹಾಲಕ್ಕಿ ಒಕ್ಕಲಿಗರು ಹಲವು ಬಗೆಯ ಅಡ್ಡವೇಷಗಳ ಮೆರವಣಿಗೆಯನ್ನು ಮಾಡಿ ಜನತೆಯನ್ನು ರಂಜಿಸುತ್ತಾರೆ. ಹಗಣವೆಂದರೆ ಅಡ್ಡವೇಷಗಳ ಸ್ವೇಚ್ಛಾವಿಹಾರೋತ್ಸವ; ಹಳಿಯುವಿಕೆ, ಅನುಕರಣೆ ಪ್ರಧಾನವಾದ, ಕಥಾವಸ್ತು ಗೌಣವಾದ ಒಂದು ಅಣುಕು ನಾಟಕ. ಹಗಣವಾಡುವ ಪದ್ಧತಿ ಹಿಂದೆ ಅನೇಕ ಬ್ರಾಹ್ಮಣೇತರ ಸಮಾಜದಲ್ಲಿ ಬಳಕೆಯಲ್ಲಿದ್ದು ಇತ್ತೀಚೆಗೆ ನಶಿಸ ತೊಡಗಿದೆ.

**೪. ಗುಮಟೆ ಪದ:**

ಗುಮಟೆ ಪದವು ಗೀತ, ವಾದ್ಯ ಪ್ರಧಾನವಾದ ಕ್ವಚಿತ್ತಾಗಿ ನೃತ್ಯಾಭಿನಯಗಳಿಗೆ ಅವಕಾಶವಿರುವ ಮೇಳಗೀತೆ. ಇದರಲ್ಲಿ ಗುಮಟೆ ಹಾಗೂ ಅದರ ಜೊತೆಯಲ್ಲಿ ಹಾಡುವ ಪದಕ್ಕೆ ಮಹತ್ವ. ದುಡಿದು ದಣಿದ ಹಾಲಕ್ಕಿ ಒಕ್ಕಲಿಗರು, ರಾತ್ರಿಯ ಬಿಡುವಿನ ವೇಳೆಯಲ್ಲಿ ತುಲಸಿಯ ಮುಂದೆ ಇಲ್ಲವೆ ಗ್ರಾಮದೇವತೆಯ ಮುಂದೆ ಸಾಲುಗಟ್ಟಿ ಅರೆಮಗ್ಗುಲಾಗಿ ನಿಂತು ಗುಮಟೆಯನ್ನು ಬಾರಿಸುತ್ತ ಹಾಡುತ್ತಾರೆ. ಸ್ವರಗಳ ವಿಶೇಷ ಪರಿಚಿತವಿಲ್ಲದೆ, ಮಂದ್ರ ಮಧ್ಯಗಳಲ್ಲಿಯೇ ಎಲ್ಲ ಸೊಲ್ಲುಗಳನ್ನು ನುಡಿದು, ಅಲ್ಲಲ್ಲಿ ಮುಗಿತಾಯಕ್ಕೆ ತಾಳದ ಗತ್ತನ್ನು ತೀವ್ರ ಮಾಡಿ ದನಿಯೇರಿಸಿ ಮುಗಿಸುವಾಗ, ಗೆಜ್ಜೆ ಕಟ್ಟಿ ವೇಷತೊಟ್ಟ 'ಕೂಚ' ನೊಬ್ಬ ಒಮ್ಮೆಲೇ ರಭಸದಿಂದ ಮೇಳದ ಮುಂದೆ ಕುಣಿಯುತ್ತಾನೆ. ಕೆಲವೊಮ್ಮೆ ಗುಮಟೆಯ ಪದ ರಾತ್ರಿಯಿಡೀ ನಡೆಯುವುದಿದೆ. ಆಗ ಮನೋರಂಜನೆಗಾಗಿ 'ಹಗಣ' ವೇಷಗಳನ್ನು ತರುತ್ತಾರೆ, ಗುಮಟೆಯ ಗಂಡುಧ್ವನಿಯ ಲಂಬಿತ ರಭಸದ ಬಡಿತ ಹಾಗೂ ಗುಮಟೆಯ ಪದದ ಎಡೆಬಿಡದ ರಾಗಾಲಾಪಗಳ ಅದೇತನದ

ಬೇಸರಿಕೆಯುನ್ನು ದೂರವಮಾಡಿ. ಹೊಸ ಉತ್ಸಾಹ ಮೂಡಿಸುವಲ್ಲಿ ಈ ಹಗರಣ ವೇಷಗಳು ನೆರವು ನೀಡುತ್ತವೆ. ಗಂಗಾಷ್ಟಮಿ, ಕಾರ್ತಿಕೋತ್ಸವ, ತುಲಸಿ ವಿವಾಹ, ಸುಗ್ಗಿ ಸಂಕ್ರಾಂತಿ, ಯುಗಾದಿ ಹಬ್ಬಗಳಲ್ಲಿ, ವಿವಾಹಾದಿ ಮಂಗಲ ಕಾರ್ಯಗಳಲ್ಲಿ ಗುಮಟೆಯು ಪದಗಳ ರಭಸ ಹೆಚ್ಚು. ಗುಮಟೆಯು ಪದ ಆರಂಭಿಸುವಾಗ, ತುಲಸಿಗೆ ಕಾಯಿಟ್ಟು ಪ್ರದಕ್ಷಿಣೆಯುನ್ನು ಹಾಕಿ ಸ್ತುತಿಸುತ್ತಾರೆ:

ತಾಯಿ ನೋಡೆ ತುಳುಸಮ್ಮನ ಮಯಲಲ್ಲಿ[೪]
ಸಣ್ಣ ಸಣ್ಣ ಮಕ್ಕಳೆ ನಾವ್ ಬಂದೊ
ತಾಯಿ ನೋಡೆ ತುಳುಸಮ್ಮನ ನೋಡಳಿಕೆ[೫]
ಕೆಳುಗೆ ನೋಡು ಶಿನ್ನದ[೬] ನೆಲುಗಟ್ಟು
ಮೇಲೆ ನೋಡು ಬೆಳಿಕಪ್ಪಡ ಗುಡಗಟ್ಟು[೭]
ಸುತ್ತ ತಿರಗಿ ಕಾಯಾರು ಇಟ್ಟಿರುವೊ
ಸರುಣ ಮಾಡಿ ಗುಮಟೆಯು ಹಿಡದಿರುವೊ
ಬರುದೆಗಿದ್ದ[೮] ಹಾಡೆಲ್ಲ ಬಂದಿದುರೆ[೯]
ಸಂಜೆ ಮುಂದೆ ನಿನ್ನ ನೆನೆದಿರುವೊ
ಬೆಳ್ಳಿ ಮೂಡಿ ಬೆಳಗಾಗುವಲ್ಲಿ ತನಕೆ
ಸೂರ್ಯಮೂಡಿ ಹಂದಿಯಾಗುವಲ್ಲಿ[೧೦] ತನಕೆ
ಹಾಡು ಚಲ್ಲಿ ಶಿತ್ತಾರ[೧೧] ಬರದೋತ[೧೨]

ಹಾಲಕ್ಕಿಗೌಡ ತುಲಸಿಗೆ ಕಾಯಿಟ್ಟು, ತಲೆಬಾಗಿ ಗುಮಟೆ ಹಿಡಿದರೆ ತೀರಿತು; ಗುಮಟೆಯು ತಾರಸ್ವರಕ್ಕೆ, ನೊರೆಕಿತ್ತು ಹರಿಯುತ್ತದೆ ಪದ ಪ್ರವಾಹ ಗುಮಟೆಯು ಗಂಡುಧ್ವನಿ, ಮರೆತ ಪದ

---

೪. ಸುತ್ತಲೂ ೫. ನೋಡಲಿಕ್ಕೆ ೬. ಚಿನ್ನದ ೭. ವಸ್ತ್ರದ ಮೇಲ್ಗಟ್ಟು ೮. ಬರದಿದ್ದ ೯. ಬಂದರೆ ೧೦. ಉದಯವಾಗು ೧೧. ಚಿತ್ರ ೧೨. ಬರೆದು ಹೋಯ್ತು.

ಗಳನ್ನೂ ಎಚ್ಚರಿಸುತ್ತದೆ. ಅತ ಪದ ಹೇಳತೊಡಗಿದರೆ, ಬೆಳ್ಳಿ ಮೂಡಿ ಬೆಳಗಾಗುವವರೆಗೂ ಹೇಳಬಲ್ಲ. ಅವನ ಬಾಯಿಂದ ಬಂದ ಪದಗಳು ಕಣ್ಣ ಮುಂದೆ ಚಿತ್ರಮಾಲೆಯನ್ನೇ ಬರೆಯಬಲ್ಲವು.

ಹಿಂದೆ ರಾತ್ರಿಯಿಡೀ ಗುಮಟೆಯ ಪದ ಹಾಡುವಾಗ, ರಾಮಾಯಣ, ಮಹಾಭಾರತ, ಭಾಗವತಗಳಿಗೆ ಸಂಬಂಧಿಸಿದ ಉದ್ದುದ್ದ ಗುಮಟೆಯ ಪದಗಳನ್ನು ಹಾಡುತ್ತಿದ್ದರು. ಇಂದು ಇಂತಹ ಉದ್ದವಾದ ಗುಮಟೆಯ ಪದಗಳನ್ನು ನಿದ್ದೆಗೆಟ್ಟು ಕೇಳುವ ವ್ಯವಧಾನ ಕಡಿಮೆಯಾದ್ದರಿಂದ ಅವು ಮಾಯವಾಗುತ್ತಲಿವೆ. ಅದಕ್ಕೆ ಬದಲಾಗಿ ಯಾವುದೋ ಪುರಾಣ ಪ್ರಸಂಗದಲ್ಲಿಯ ಚಿಕ್ಕ ಸನ್ನಿವೇಶವನ್ನು, ಐತಿಹ್ಯ ಇಲ್ಲವೆ ಕಿನ್ನರ ಕತೆಯ ತುಣುಕನ್ನು, ಅಥವಾ ಇಂದಿನ ಸಾಮಾಜಿಕ, ರಾಜಕೀಯ, ಆರ್ಥಿಕ ವಸ್ತುವನ್ನುಳ್ಳ ಚಿಕ್ಕ ಚಿಕ್ಕ ಪದಗಳನ್ನು ಹಾಡುವರು. ಈ ಪದಗಳಲ್ಲಿ ಕಾವ್ಯಸತ್ವ ಹೆಚ್ಚಾಗಿದ್ದು, ಭಾವಗೀತೆಯ ಲಕ್ಷಣವನ್ನು ಹೊಂದಿವೆ:

ಶೆಣ್ಣ[೧೩] ಶೆಣ್ಣ ಹಶೋ ಬಾಲಕರೋ
ಇದ್ಯೆ[೧೪] ತೆಳಿಯಾ[೧೫] ಬುದ್ದೀ ತೆಳಿಯೊವ್ರೋ
ನಾಮೋ ಮುಂಗ್ಸೆ ಕೊಡಲಾಡೆ ಉಳಿದವರೋ
ನಾಮೆ ಮುಂಡ್ಕೆ ಚಪೆ[೧೬] ನೀರ ಕುಡದವರೋ
ನಾಮೋ ಶಮುದರ[೧೭] ನೆಲಿಯ[೧೮] ನೋಡಲೆಲ್ವೋ
ನಾಮೋ ಶಮುದರ ನೀರಾ ಕುಡಿನೆಲ್ವೋ
ನಾಮೋ ತಾಯಿಯೊಂದು ರುಣವಾ ಕುಡಿದವರೋ.

ಹಾಲಕ್ಕಿ ಒಕ್ಕಲಿಗರ ವಿನಯಶೀಲತೆಗೆ ಈ ಪದ್ಯವೊಂದು ಸಾಕ್ಷಿಚಿತ್ರ. ವಿದ್ಯೆ ಬುದ್ಧಿಯಿಲ್ಲದ ಇವರು ಶಹರ ಕಂಡವರಲ್ಲ.

---

೧೩. ಸಣ್ಣ ೧೪. ವಿದ್ಯೆ ೧೫. ತಿಳಿಯುವು ೧೬. ಸಪೆ ೧೭. ಸಮುದ್ರ ೧೮. ಆಳ

ಕಾಡಿನ ಮುಂಗುಸಿ, ಚಾಪೆಯ ಜೊತೆಯಲ್ಲಿ ಆಡಿ, ಮುಂಡಿಕೆಯ ನೀರು ಕುಡಿದವರು. ಸಾಗರದಾಳಗಲಗಳನ್ನರಿಯದವರು. ತಾಯ 'ರುಣ'ದಿಂದ ಬೆಳೆದ ಇವರಲ್ಲಿ ಸಮುದ್ರದ ಕಟುತೆಯಿಲ್ಲ.

ತಮ್ಮ ಸುತ್ತು ಮುತ್ತಲಿನವರ ಉಡಿಗೆ ತೊಡಿಗೆ, ಜೀವನದ ರೀತಿ ನೀತಿಗಳ ವಿಷಯದಲ್ಲಿ ಹಾಲಕ್ಕಿ ಒಕ್ಕಲಿಗರು ಹಲವೆಡೆ ಪ್ರತಿ ಕ್ರಿಯೆ ವ್ಯಕ್ತಪಡಿಸಿದ್ದಾರೆ :

ಹಣೆ ಮೇ–ನೆ ಶಿಂದುರ[೧೯] ಮುಡಿಮೇ–ನೆ ಹೂವೋ
			ನಾಡೋರುಡುಗೀಗೆ
ಆರೂ ಮೂರು ಬೆರಕೆ ಮಣಿಯೋ ಕೊಮ್ಮಣಗಿತ್ತಿಗೀಗೆ[೨೦]
ಕುತ್ತಿಗೆ ತುಂಬಾ ಸಾವಿರ ಕರಿಮಣಿ ಒಕ್ಕಲಗಿತ್ತೀಗೆ
ತಲೆ-ಮೇನೆ ತಂಪು ಬಾಯಲ್ಲಿ ಇಂಪು ಕೊಂಕಣಗಿತ್ತೀಗೆ
ಕಯ್ಯಲಿ ಪನ್ನಣಿ[೨೧] ಬಾಯಲಿ ಬಿನ್ನಣಿ ಮಡಿವಳಗಿತ್ತೀಗೆ
ಸಾವಿರ ಪುರಾಣ್ ಹದಿನೆಂಟ್ ಪಾತೋ ವಾಣೇರ್
			ಹೆಣ್ಣೀಗೆ
ಗೋರು[೨೨] ಬಲೆ ಮೀನಿನ ಬುಟ್ಟಿ ಹರ್ಕಂತ್ ಹೆಣ್ಣೀಗೆ
ಹಿಲ್ಲೂರ್ ನೆಟ್ಟಿ ಚೆನಗಾರ ಕೊಯ್ಲು ಹಳ್ಳೇರ್ ಹೆಣ್ಣೀಗೆ.

ಈ ಪದದಲ್ಲಿ ನಾಡವರ ಹೆಣ್ಣು, ವಾಣೇರ್ ಹೆಣ್ಣು, ಒಕ್ಕಲ ಗಿತ್ತಿ, ಕೊಂಕಣಗಿತ್ತಿ, ಕೊಮ್ಮಣಗಿತ್ತಿ, ಹರ್ಕಂತ್ ಹೆಣ್ಣು, ಹಳ್ಳೇರ್ ಹೆಣ್ಣು ಇವರ ಜೀವನ ರೀತಿ ನೀತಿಯ ಚಿತ್ರ ಸ್ಫುಟವಾಗಿ ಮೂಡಿದೆ. ಹಾಲಕ್ಕಿ ಹೆಣ್ಣುಮಕ್ಕಳು ಹೊರೆಗಟ್ಟಲೆ ಮಣಿಸರ ಹೊತ್ತು ತಿರುಗುವುದನ್ನು ಇಂದೂ ನೋಡಬಹುದು.

ಕೆಲವು ಪದಗಳು ದಟ್ಟ ಸಾಂಕೇತಿಕತೆಯಿಂದ ದುರೂಹ್ಯ ವಾಗಿವೆ :

---

೧೯. ಚಂದ್ರ ೨೦. ಪೋಜುಗಾರ್ತಿ ೨೧. ಬಟ್ಟೆಯ ಮಡಿಕೆ ೨೨. ಸೋಸುವ

ಊರಾಲೇ ಮುಂದೆ ಹಣ್ಣು ಮಾವಿನಮರ ಚಂದುಮಾಮಣ್ಣ
ಆಮರ ತುದಿಮೇ-ನೇ ಹಣ್ಣು ಮಾವಿನಹಣ್ಣು ಚಂದುಮಾಮಣ್ಣ

ಕಣ್ಣಿಲ್ಲದಾತ ಕಂಡಾನೋ ಆ ಹಣ್ಣ ಚಂದುಮಾಮಣ್ಣ
ಕಾಲಿಲ್ಲದಾತ ಹತ್ತ್ಯಾನೋ ಆ ಮರ ಚಂದುಮಾಮಣ್ಣ
ಕಯ್ಯಿಲ್ಲದಾತ ಕೊಯ್ದ್ಯಾನೋ ಆ ಹಣ್ಣ ಚಂದುಮಾಮಣ್ಣ.

ಗುಮಟೆಯ ಪದಗಳಲ್ಲಿ, ಕನಕದಾಸ, ಪುರಂದರದಾಸರ ಹಾಡುಗಳು ದಿನಕರ ದೇಸಾಯಿಯವರ ಪದಗಳು, ಗಟ್ಟದ ಮೇಲಿನ ಲಾವಣಿಗಳು ಸೇರಿಹೋಗಿವೆ. ಲಾವಣಿಯೊಂದು ಗುಮಟೆಯ ಪದಕ್ಕಳವಟ್ಟುದನ್ನು ಅವಲೋಕಿಸಿ :

ಗೆಜ್ಜೆ ಮೆ-ನ್ ಗೆಜ್ಜೆ ಕಾಲ್ ಗುಜ್ಜಾರ್ ತೋರಿ
ಶಿಂಗಾರ್ ಕಣ್ಣಿನ ಬಂಗಾರ್ ಕಡಗ ಹೆರ್ಟ್ಟಳಿಟ್ಟಂಗೆ
ನಿನ್ನ ಮೆ-ನೆ ಮನಕೋಯ್ತೊ ಎನ್ನಾರ್ ಮನ
ನಿನ್ನೊಂದ್ ಹೊಳೀಗ್ ಹಾಕೋದಿಲ್ಲ ನಾನಾ.

ಗುಮಟೆಯ ಪದ ಇಂದೂ ಹಾಲಕ್ಕಿ ಒಕ್ಕಲಿಗರ ಪ್ರಮುಖ ಮನರಂಜನೆಯಾಗಿ ಉಳಿದಿದೆ. ಗುಮಟೆಯ ಪದದ ಸ್ಪರ್ಧೆಯೇರ್ಪಡಿಸಿ, ಉತ್ತಮ ಪದಗಾರನಿಗೆ, ಚೆನ್ನಾಗಿ ಗುಮಟೆಯನ್ನು ಬಾರಿಸಿದವರಿಗೆ ಬಹುಮಾನವಿತ್ತು ಸನ್ಮಾನಿಸುವ ರೂಢಿ ಇವರಲ್ಲಿ ಹಲವೆಡೆಯಿದೆ. ವರ್ಷಕ್ಕೊಮ್ಮೆಯಾದರೂ ಗುಮಟೆಪದ ಹಾಡಲೇಬೇಕೆಂಬ ನಿರ್ಬಂಧ ಹಾಲಕ್ಕಿಗಳಲ್ಲುಳಿದಿರುವುದು ಜಾನಪದದ ಪುಣ್ಯ.

**೫. ಬೇಟೆ :**

ಬೇಟೆಯಾಡುವುದು ಹಾಲಕ್ಕಿಗಳಿಗೆ ಪ್ರಿಯವಾದ ಹವ್ಯಾಸ. ಅನೇಕರು ಬೇಟೆಯ ನಾಯಿಯನ್ನು ಸಾಕುತ್ತಾರೆ. ವರ್ಷಕ್ಕೊಮ್ಮೆ

ಯಾದರೂ 'ಹೊಲ'[೨೩] ಆಡಲೇಬೇಕು. ಇಲ್ಲದಿದ್ದಲ್ಲಿ 'ಬೇಟೆಯ ನಾಪ'ನ ಬಾಧೆ ತಟ್ಟುತ್ತದೆಯೆಂಬ ನಂಬಿಕೆ ಬಲವತ್ತರವಾಗಿದೆ. ಕಾಡುವಾಸಿಗಳಾದ ಇವರಿಗೆ ಹಿಂದಕ್ಕೆ ಬೆಳೆರಕ್ಷಣೆಗಾಗಿ ಮತ್ತು ಆಹಾರಕ್ಕಾಗಿ ಬೇಟೆಯಾಡುವ ಪ್ರಸಂಗ ಮೇಲಿಂದ ಮೇಲೆ ಬರುತ್ತಿತ್ತು. ಇವರ ಅನೇಕ ಹಾಡುಗಳಲ್ಲಿ ಬೇಟೆಯ ಪ್ರಸ್ತಾಪ ಬರುತ್ತದೆ. ಬೇಟೆಯಾಡುವುದನ್ನೇ ಕುಲಕಸಬಾಗಿ ಪರಿಗಣಿಸಿದ ತಾಯಿಯೊಬ್ಬಳು ಮಗನಿಗೆ ಹುಲಿಬೇಟೆಯಾಡಲು ಪ್ರಚೋದಿಸುತ್ತಾಳೆ:

ಒಂದೇ ತಾಯೀಗೇ ಒಂದೇ ಮಗಹುಟ್ಟೇ
ಶಿದ್ದೆಣೆಯಿಕ್ಕೇ ಶಲಗೂವ್ರೊ[೨೪]। ಮಗನೆ ಕೇಳೊ
ಹೋಗುಬೇಕೊ ಹುಲಿಯಾ ಬೆ–ಟೇಗೊ

ಮಗನು ಸಾಹಸಯುಕ್ತವಾದ ಬದುಕನ್ನು ಬದುಕಬೇಕೆಂಬುದು ತಾಯಿಯ ಅಭಿಲಾಷೆ. ಅವಳ ಅಭೀಷ್ಟವನ್ನು ಹುಸಿಗೊಳಿಸುವವನಲ್ಲ ಮಗ:

ಬಿಲ್ಲೊಂದ್ ಬಾಣವ ಹಿಡಿದಿದನೊ ಬಾಲಪ್ಪನೆ
ಮೂಡಿನ ಅಡವೀಗೆ ನಡೆದೀಯೊ।

ಹುಲಿ ಹೊಡದೇ ಮನಗೇ ಬರೂವನೊ ತಾಯವ್ವೆ
ತಾನೊಂದು ಬಳುವಾ[೨೫] ತರೂವಾಳೊ।
ತಾನೊಂದು ಬಳುವಾ ತಂದು ಏನಂಬಾಳೊ
ಹುಲಿ ಹೊಡದಾ ದಿಟ್ಟಿ[೨೬] ಹರಿಯಾಲೊ.

ಹುಲಿ ಹೊಡೆದ ಮಗನ ಕೆಚ್ಚನ್ನು ಮೆಚ್ಚಿದ ತಾಯಿ ಕೆಟ್ಟ ದೃಷ್ಟಿ ತೊಲಗಲೆಂದು ಮಗನಿಗೆ ಬಳುವೆತ್ತಿ ಚೆಲ್ಲುತ್ತಾಳೆ. ಹೀಗೆ ಬೇಟೆಗೆ ಹೋದಾಗ ಹುಲಿಬಾಯಿಗೆ ತುತ್ತಾಗಿ ಸತ್ತವರೂ ಇಲ್ಲದಿಲ್ಲ[೨೭]

೨೩. ಬೇಟೆ ೨೪. ಸಲಹುವೆ ೨೫. ದೃಷ್ಟಿ ತೆರೆಯುವ ಆರತಿ ೨೬. ದೃಷ್ಟಿ ೨೭. ನೋಡಿ: ಡಾ। ಎಲ್. ಆರ್. ಹೆಗಡೆ: ತಿಮ್ಮಕ್ಕನ ಪದಗಳು ಪು. ೧೦೭–೧೧೩

ಬೇಟೆಗೆ ಹೋದ "ಪುಂಡುಗಾರ ಶಂಪ್ಪ" ಹತನಾಗಿ, ಮುಂದೆ ವೀರದೇವತೆಯಾದ ಪ್ರಸಂಗವೊಂದು ಉಪಲಬ್ಧವಿದೆ:

ಕೊ–ಟೆ[೨೮] ಬಾವಿಯಾ ಚಂತೆ[೨೯]ಬೊ_ಳ ಮೆ–ನೆ[೩೦]
ಹೊಲವಾ ಕಟ್ನೆಲ್ವೊ[೩೧] ಹೊಲವಾ ಕಟ್ನೆಲ್ವೊ
ದೊರೆಗೋಳ್[೩೨] ಗವಿುಯಾನ್[೩೩] ಹೊಡೆನೆಲ್ವೊ[೩೪]
ಕೊ–ಟೆ ಬಾವಿಯಾ ಬೆಳಿಯಾ ಒಕ್ಕಲೆ
ಗವಿುಯಾನ್ ಹೊರನೆಲ್ವೊ[೩೫] ಗವಿುಯಾನ್ ಹೊರನೆಲ್ವೊ
ಗವಿುಯನ ಮಾಶಾ[೩೬] ಹೊರನೆಲ್ವೊ
ಪುಂಡೂಗಾರ[೩೭] ಪುಂಡೂ ಶಂಪ್ತ
ಬೆ–ಡೆಂದ್ ಹೇಳನೆಲ್ವೊ ಬೆಡೆಂದ್ ಹೇಳನೆಲ್ವೊ
ಆದರಾ ಯಾರೊಂದ್ ಕೇಳನೆಲ್ವೊ[೩೮]
ಪುಂಡೂಗಾರಾ ಪುಂಡೂ ಶೊಂಟಕೆ[೩೯]
ಬೇಡೀ ಹಾಕನೆಲ್ವೊ ಬೇಡಿ ಹಾಕನೆಲ್ವೊ
ಕಯ್ಯಿಗೆ ಕೊ-ಳಾ[೪೦] ಹಾಕನೆಲ್ವೊ
ಚಳಿನೀರು ಚಳಿಶಂದಿಯು ಬೆಟದಲ್
ತ–ಲಿಯಾ ಹೊಡೆನೆಲ್ವೊ ತ–ಲಿಯಾ ಹೊಡೆನೆಲ್ವೊ
ಪುಂಡೂಗಾರಾ ಶಂಪ್ಪನ ಹೊಡೆದಲ್
ಹುತ್ತೇ ಮುಡನಿಲ್ವೊ ಹುತ್ತೇ ಮುಡನಿಲ್ವೊ

ಬೇಟೆಗೆ ಹೋದ ಒಕ್ಕಲುಮಕ್ಕಳು ಮಾಂಸದಾಶೆಯಿಂದ ದೊರೆಗಳು ಹೊಡೆದ ಗವಿುಯನ್ನು ಹೊತ್ತರು. ನ್ಯಾಯ ನಿಷ್ಠುರ

---

೨೮. ಕೋಟೆ ೨೯. ಸಂತೆ ೩೦. ಗುಡ್ಡದ ಮೇಲೆ ೩೧. ಕಟ್ಟಲಿಲ್ಲವೊ? ೩೨. ಬ್ರಿಟಿಷರು ೩೩. ಕಾಡುಕೋಣವನ್ನು ೩೪. ಹೊಡೆಯಲಿಲ್ಲವೆ; ಹೊಡೆದರಲ್ಲ.
೩೫. ಹೊರಲಿಲ್ಲವೆ. ೩೬. ಮಾಂಸ ೩೭. ಯುವಕ ೩೮. ಕೇಳಲಿಲ್ಲ ಅಲ್ಲವೆ ೩೯. ಸೊಂಟಕೆ ೪೦. ಬೇಡಿ

ಮುಂಡುಗಾರ ಶಂಪ್ರ ಬೇಡವೆಂದರೂ ಕೇಳಲಿಲ್ಲ. ಆದರೆ ದೊರೆಗಳ ಕೈಗೆ ಸಿಕ್ಕಿಬಿದ್ದವ ಮಾತ್ರ ಶಂಪ್ರ. ಬ್ರಿಟಿಷರು ನಿರ್ದಯದಿಂದ ಅವನ ತಲೆ ಕತ್ತರಿಸುತ್ತಾರೆ. ಆದರೆ ಸತ್ಯ ನಿಷ್ಠ 'ಶಂಪ್ರ' ಸತ್ತಲ್ಲಿ ಹುತ್ತುಮೂಡಿ ಆತ ವೀರನೆಂದು ಪೂಜೆಗೊಂಡ.

**೬. ಕೋಳಿ ಅಂಕ :**

ಕೋಳಿ ಅಂಕವು ಒಂದು ಬಗೆಯ ಬಲಿ ಸಮರ್ಪಣೆ, ಒಂದು ಬಗೆಯ ಜೂಜಾಟ. ಗದ್ದೆ ಬಯಲ್ಲಿ ಮುಚ್ಚಂಜೆಗೆ ಕೋಳಿ ಅಂಕ ನಡೆಯುತ್ತದೆ. ಇಂತಹ ಅನೇಕ ಕೋಳಿ ಅಂಕದ ಬೈಲುಗಳಿವೆ. ಆ ಬಯಲ್ಲಿ ಸುತ್ತಲಿನ ಕೊಪ್ಪಗಳ ಒಕ್ಕಲಿಗರು ಹಾಗೂ ಇತರ ಜಾತಿಯವರು ಸೇರಿ ಅಂಕವಾಡುತ್ತಾರೆ. ಹುಂಜಗಳ ಕಾಲಿಗೆ ಕತ್ತಿ ಕಟ್ಟಿ ಕಾದಾಡಿಸಿ ಅವುಗಳ ಮೇಲೆ ನೆರೆದ ಮಂದಿ ಒಡ್ಡಕಟ್ಟಿ ಜೂಜಾಡುತ್ತಾರೆ. ಅಂಕದಲ್ಲಿ ಸೋತಕೋಳಿಯು ಗೆದ್ದಕೋಳಿಯ ಒಡೆಯನ ಪಾಲಾಗುತ್ತದೆ.

ಬೇಟೆ ಹಾಗೂ ಬಲಿಯಲ್ಲಿ ಆಸಕ್ತರಾದ ಹಾಲಕ್ಕಿಗಳು ಕೋಳಿಯಂಕ ಆಡಿ, ರಕ್ತಬಲಿ ಸಮರ್ಪಿಸದಿದ್ದಲ್ಲಿ, ಬೇಟೆ ದೇವತೆ ಹಾಗೂ ರಣ ದೇವತೆಗಳು ಮುನಿಯುವವು ಎಂಬ ನಂಬಿಕೆಯಿಂದ ಕೋಳಿಯಂಕವಾಡುತ್ತಾರೆ. ಈ ಆಟವನ್ನು ಸರಕಾರದವರು ಇತ್ತೀಚೆಗೆ ಪ್ರತಿಬಂಧಿಸಿದ್ದರಿಂದ, ಇದನ್ನು ಇಂದು ಕಣ್ಮರೆಯಲ್ಲಿ ಆಡುತ್ತಾರೆ.

# ೪. ಶಾಸ್ತ್ರ-ಸಂಪ್ರದಾಯಗಳು

## ೧ ಮದುವೆ :

ಮಾನವನ ಸ್ವೈರವೃತ್ತಿಯನ್ನು ನಿಯಂತ್ರಿಸಿ, ಕೌಟುಂಬಿಕ ಜೀವನಕ್ಕೆಡೆಯೀವ ವಿವಾಹ ಸಂಸ್ಕಾರದಿಂದ ಹಾಲಕ್ಕಿ ಒಕ್ಕಲಿಗರು ದೂರ ಹಿಡಿದು ನಿಂತವರಲ್ಲ. ಅವರ ಬದುಕಿನಲ್ಲಿ ವಿವಾಹವೊಂದು ಪ್ರಮುಖ ಸಂಸ್ಕಾರ. ಬ್ರಾಹ್ಮಣಾದಿ ಮೇಲ್ವರ್ಗದವರ ಮದುವೆಗಳಲ್ಲಿ ಪುರೋಹಿತರು ಹಾಗೂ ಅವರ ಮಂತ್ರಗಳಿಗೆ ಪ್ರಾಧಾನ್ಯವಿದ್ದರೆ, ಹಾಲಕ್ಕಿ ಒಕ್ಕಲಿಗರ ಮದುವೆಗಳಲ್ಲಿ ಇವಕ್ಕೆ ಪ್ರವೇಶವಿಲ್ಲ. ಮದುವೆ ನಡೆಯುವುದು ಊರ ಗೌಡ ಹಾಗೂ ಬುದವಂತರ ಹಿರಿತನದಲ್ಲಿ. ಮದುವೆಯಲ್ಲಿ ಹಾಡುವ ವಿವಾಹ ಗೀತೆಗಳು ಪುರೋಹಿತರ ಮಂತ್ರಸ್ಥಾನವನ್ನು ಆಕ್ರಮಿಸುತ್ತವೆ. ಹಾಡುಗಳಲ್ಲಿ ವಿವಾಹಾಚರಣೆಯ ವಿಧಿ ವಿಧಾನಗಳ ವಿಸ್ತೃತ ವಿವರಣೆ ಬರುತ್ತದೆ. ಈ ಹಾಡುಗಳು ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿಯ ಅಧ್ಯಯನಕ್ಕೆ ನೆರವು ನೀಡುತ್ತವೆ. ವಿವಾಹ ಚಡಂಗಗಳಲ್ಲಿ ಮುಖ್ಯವಾದವು ಇಂತಿವೆ : ೧. ಕೂಸು ಕೇಳುವುದು ೨. ಕೂಸು ನಿಶ್ಚಯಿಸುವುದು ೩. ವೀಳ್ಯ ಕೊಡುವುದು ೪. ಅಕ್ಕನ ಕರೆಯುವುದು ೫. ಮನೆ ಮಾಡುವುದು ೬. ಚಪ್ಪರ ಹಾಕುವುದು ೭ ಮುಹೂರ್ತ ಬತ್ತ ಮೆರೆಯುವುದು ೮. ಕಲಶ ತಯಾರಿಸುವುದು ೯. ಹಸಗೆರೆ ಬರೆಯುವುದು ೧೦. ಜವಳಿ ತರುವುದು ೧೧. ಪನ್ನೆ ಮಾಡುವುದು ೧೨. ತಿಗರು ತಿಕ್ಕುವುದು ೧೩. ನೀರು ಮೀಯುವುದು ೧೪. ತುಲಸಿ ಪೂಜೆ ಮಾಡುವುದು ೧೫. ಮುಹೂರ್ತ ಕಂಬ ನೆಡುವುದು ೧೬. ಬಾಗಿಲು, ಒರಳು, ಒಲೆ, ಗಣೇಶಪೂಜೆ ಮಾಡುವುದು

೧೭. ಮದುಮಗನನ್ನು ಸಿಂಗರಿಸುವುದು ೧೮. ಉಡುಗೊರೆ ೧೯. ಭಾವನು ಚಂಚಿ ಹಿಡಿಯುವುದು, ಅಕ್ಕ ತಳಿಗೆ ಬಟ್ಟಲು ಹಿಡಿಯುವುದು ೨೦. ದಿಬ್ಬಣ ಹೊರಡುವುದು ೨೧. ಬಳಿ ಕಳಗುವುದು ೨೨. ಎದುರುಗೊಳ್ಳುವುದು ೨೩. ಅಳಿಯನನ್ನು ಕರೆಯುವುದು ೨೪. ಹೆಣ್ಣು ಸಿಂಗರಿಸುವುದು ೨೫. ಧಾರೆ ೨೬. ಧಾರೆಯ ಉಡುಗೊರೆ ೨೭. ಹಸೆಮಣೆಗೆ ಹೋಗುವುದು ೨೮. ಮರುದುಂಬುವುದು ೨೯. ಶಿರಿಶಕಲ ೩೦. ಹೆಣ್ಣು ಅಡಗಿಸುವುದು ೩೧. ಓಕುಳಿ ೩೨. ಬಳುವಳಿ ೩೩. ಮನೆ ತುಂಬಿಸುವುದು ೩೪. ಬಾಗಿಲು ತಡೆಯುವುದು ೩೫. ಆರತಿಯೆತ್ತುವುದು. ಹಿಂದಕ್ಕೆ ವಾರಗಟ್ಟಲೆ ನಡೆಯುವ ಈ ಸಮಾರಂಭ ಇಂದು ತಾಸಿನಲ್ಲಿಯೇ ಮುಗಿದು ಹೋಗುವುದರಿಂದ ಎಷ್ಟೋ ಚಡಂಗಗಳು ಕರಗಿ ಹೋಗಿವೆ. ಈ ಹಾಡುಗಳ ವಿವರ ವಿಶ್ಲೇಷಣೆಗೆ ಇಲ್ಲಿ ಅವಕಾಶವಿಲ್ಲದಿರುವುದರಿಂದ, ಮಾದರಿಗಾಗಿ ಒಂದೆರಡು ಗೀತೆಗಳನ್ನು ಮಾತ್ರ ನೋಡಬಹುದು:

i) ವೀಳ್ಯ ಕೊಡುವುದು : ಕೂಸು ನಿಶ್ಚಯವಾದ ಮೇಲೆ ನೆಂಟರಿಷ್ಟರಿಗೆ ವೀಳ್ಯ ಹಂಚುವ ಪದ್ಧತಿಯಿದೆ :

ಹೊತ್ತಾರೆ[1] ಮುನ್ನ ಎದ್ದೀಯೋ ಯಜಮಾನ
ಶೊಂಟಕೆ ನೆ–ವಳವ ಇಡೀದೆಯೊ[2]। ಯಜಮಾನ
ಕರಿಯ ಕಂಬಳಿ ಹೆಗಲೀಗೆ[3]। ಹೇರೀಕಂಡಿ
ಈಳೀದ[4] ಹೆಡಗೆಗೆ ನೆಡsದೆಯೋ|

ಮುಂದೆ ವೀಳ್ಯ ಹಂಚುವ ವಿವರಗಳೆಲ್ಲ ಹಾಡಿನಲ್ಲಿ ಬರುತ್ತವೆ.

ii) ಮೂಹೂರ್ತ ಬತ್ತ ಮೆರೆಯುವುದು: ಮದುವೆಯಲ್ಲಿ ಸೇಸಕ್ಕಿ, ಕಳಸ ಹಾಗೂ ಪಾಯಸಕ್ಕೆ ಬೇಕಾಗುವ ಅಕ್ಕಿಯನ್ನು ಮೆರೆಯುವ ಚಡಂಗವೊಂದಿದೆ:

---

೧. ಬೆಳಿಗ್ಗೆ ೨. ಜಡಿದೆ ೩. ಹೆಗಲಿಗೆ ೪. ವೀಳ್ಯದ

ಕಯ್ರುಲಿ[೫] ವನಕೆಗೆ ಮಾವಿನ ತಿರಳೋ[೬]
ಕಯ್ರುಲಿ ವನಕೆಗೆ ಮಾವಿನ ತಿರಳೋ
ಶೋಬೀರೇ ಶೋಬಾನ
ಶೋಬೀರಂಬ್ರ ಶುಬನಾರಿಯೋರ್ ಶೋಬಿರೇ ಶೋಬಾನ.

iii) ಧಾರೆ: ಹೆಣ್ಣಿನ ತಂದೆ ತಾಯಿಯರು ಊರಗೌಡ, ಬುದವಂತರ ಸಮ್ಮುಖದಲ್ಲಿ ವಧುವನ್ನು ವರನಿಗೆ ಧಾರೆಯೆರೆಯುತ್ತಾರೆ :

ಧಾರೆಯೆರೆವದು ಗಿಂಡಿ ಮೊ–ರೆ ತೊಳೆವದು ಗಿಂಡಿ
ಮುಣ್ಣುಳ್ಳರು ಗಿಂಡಿ ಹದಿನಯ್ದು । ತಡದೀಕಂಡೇ
ಹಾಲಲ್ಲೇ ದಾರೇ ಎರೀದಾರೊ[೭] ಅಪ್ಪಪ್ಪವ್ವೆ
ನೀರಲ್ಲರು ಕಯ್ಯ ತೊಳೀದಾರೊ। ಅಪ್ಪಪ್ಪವ್ವೆ
ಕನ್ನೆ ಹೆಣ್ಣಿನ ಪುಣ್ಯ ಪ್ಪಡೀದಾರೊ।

**೨. ಶೋಭನ :**

ಹಾಲಕ್ಕಿಗಳು ಹೆಣ್ಣು ಮ್ಯೆನೆರೆಯುವ ಪೂರ್ವದಲ್ಲಿ ಮದುವೆ ಮಾಡಿ, ಮ್ಯೆನೆರೆದ ಮೇಲೆ ಶೋಭನ ಮಾಡುತ್ತಾರೆ. ಕೆಲವೆಡೆ ಹೆಣ್ಣು ಮ್ಯೆನೆರೆದ ಒಂದು ವರ್ಷದ ಮೇಲೆ ಶೋಭನ ಮಾಡುವ ಆರೋಗ್ಯಕರ ಸಂಪ್ರದಾಯವಿದೆ.

ಹೆಣ್ಣು ತವರು ಮನೆಯಲ್ಲಿರುವಾಗ ಮ್ಯೆನೆರೆದರೆ ಅವಳಿಗೆ ಹೂವು ಚಿನ್ನ, ಬಣ್ಣ ಕೊಟ್ಟು ಗಂಡನ ಮನೆಗೆ ಕರೆದುಕೊಳ್ಳುವಾಡಿಕೆ: ಹಾಲು ಕಾಶೂ[೮]ನಾರಿ ಬೊ–ನಾ[೯] ಬಾಗೂ[೧೦] ನಾರಿ
ಈಗಿದ್ದ ನಾರಿ ಒಳಗಿಲ್ಲ। ಹೆರಗಿಲ್ಲ
ಇಂಬೇ[೧೧] ಬನಸೇರಿ ಮಿಯ್ನೆರದೊಂ[೧೨]।ನಾರೀಗೆ

---

೫. ಕೈಗರು(ಒಂದು ಜಾತಿಯವರು) ೬. ತಳಿರು ೭. ಎರೆದರು ೮. ಕಾಯಿಸುವ ೯. ಅನ್ನ ೧೦. ಅನ್ನದ ನೀರು ಸೋಸು ೧೧. ಲಿಂಬೆ ೧೨ ಋತುಮತಿಯಾದಳು.

ಬಣ್ಣ[೧೩]ನಾರೇ ಕೊಟ್ಟೇ ಕರತಾರೋ। ಮನೆಗೆಲ್ಲ
ಶಿನ್ನ[೧೪]ನಾರು ಕೊಟ್ಟೇ ಕರತಾರೋ। ಮನೆಗೆಲ್ಲ
ಹೂಂಗನಾರೇ ಕೊಟ್ಟೇ ಕರತಾರೋ।

ಶೋಭನಕಾರ್ಯವನ್ನು ಹಾಲಕ್ಕಿ ಒಕ್ಕಲಿಗರು ವಿಶೇಷ ವೈಭವದಿಂದ ಆಚರಿಸುತ್ತಾರೆ; ಅದಕ್ಕಾಗಿ ಸಾಕಷ್ಟು ಹಣ ವ್ಯಯವಾಗುತ್ತದೆ. ಆದರೆ ಇದರ ಖರ್ಚಿನ ಭಾರದಿಂದ ತತ್ತರಿಸುವವ ಗಂಡಿನ ತಂದೆ :

ಮಡದೀ ಮಿಂದೀದಂದೇ ನೆಲ್ಲಗರು[೧೫] ಶಂತೋಶ[೧೬]
ಮಾವನರು ಶಿಂತೀ[೧೭] ಹೆರುದಾದೊ[೧೮] | ಯಾತಕೆ
ಅವಲಕ್ಕಿಗಿನ್ನೆಲ್ಲಿ ಗರೂಶಲಿ[೧೯] ।

ಪತಿಗೆ ಹೆಂಡತಿಯೊಡನಾಡುವ ಸಂತೋಷವಾದರೆ, ಅವಳ ಮಾವನಿಗೆ ಶೋಭನದ ಖರ್ಚಿನ ತಲೆ ಬೇನೆ. ಹಾಡುಗಾರ್ತಿ ನಿತ್ಯ ಉದರಂಭರಣೆಗೇ ತತ್ವಾರವಾದ ಹಾಲಕ್ಕಿ ತಂದೆಯು ಅಂತರಂಗದ ತುಮುಲವನ್ನಿಲ್ಲಿ ಸ್ವಾರಸ್ಯವಾಗಿ ಬಣ್ಣಿಸಿದ್ದಾಳೆ.

ಹೆಣ್ಣು ಋತುಮತಿಯಾದ ಐದು, ಏಳು ಇಲ್ಲವೆ ಒಂಬತ್ತನೆಯ ದಿನಕ್ಕೆ ಗಂಡನ ಮನೆಯಲ್ಲಿ ಶೋಭನ ಕಾರ್ಯವಾಗುತ್ತದೆ. ಅಂದು ರಾತ್ರಿ ದಂಪತಿಗಳನ್ನು ಹೆಣ್ಣಿನ ತವರು ಮನೆಗೆ ಕರೆತಂದು ಅವರ ಮಿಲನಕ್ಕೆ ಅವಕಾಶ ಮಾಡಿಕೊಡುತ್ತಾರೆ.

**೩ ಬೋಳ್ ಮುಂಡೆ ಕೂಚ :**

ಹಾಲಕ್ಕಿ ಒಕ್ಕಲಿಗರಲ್ಲಿ ಹೆಣ್ಣಿನ ಸಂಖ್ಯೆ ಕಡಿಮೆ. ಹೀಗಾಗಿ ಹೆಣ್ಣಿಗೆ 'ತೆರ'ತೆತ್ತೋ ಇಲ್ಲವೆ ಹೆಣ್ಣು ತಂದ ಮನೆಗೆ ಇನ್ನೊಂದು

---

೧೩. ಸೀರೆ ೧೪. ಬಂಗಾರ ೧೫. ಗಂಡನಿಗೆ ೧೬. ಸಂತೋಷ ೧೭. ಚಿಂತೆ
೧೮. ಹೆಚ್ಚಾಯಿತು. ೧೯. ಹುಡುಕಲಿ

ಹೆಣ್ಣುಕೊಟ್ಟೋ, ಮದುವೆಯಾಗುವ ಪದ್ಧತಿಯಿದೆ. ಈ ಬಗೆಯ ಯಾವ ವ್ಯವಸ್ಥೆಗೂ ಅನುಕೂಲವಿಲ್ಲದ ಗಂಡು, ಹಾಗೆಯೇ ಉಳಿಯುವ ಪ್ರಸಂಗ ಬಹಳ. ಆದರೆ ಮಾನವ ಸಹಜ ಪ್ರವೃತ್ತಿಯಾದ ಕಾಮಸುಖದಿಂದ ಯಾರೂ ವಂಚಿತರಾಗಬಾರದಲ್ಲ? ಎಂದುಕೊಂಡ ಹಾಲಕ್ಕಿಗಳು ತಮ್ಮ ಕುಟುಂಬ ವ್ಯವಸ್ಥೆಯಲ್ಲಿಯೇ ಅವಕಾಶವೊಂದನ್ನು ಕಂಡುಕೊಂಡರು : ಈ ವ್ಯವಸ್ಥೆಯಂತೆ ಸಹೋದರರಲ್ಲಿ ಅಣ್ಣನೊಬ್ಬ ಮದುವೆಯಾಗುತ್ತಾನೆ. ತಮ್ಮಂದಿರು ಅಣ್ಣನ ಹೆಂಡತಿಯ ಜೊತೆ ಸಂಬಂಧವಿಟ್ಟುಕೊಳ್ಳುತ್ತಾರೆ.[೨೦]

ಈ ಬಗೆಯ ಸಂಬಂಧ ಅನೈತಿಕವಲ್ಲ. ಇಂಥ ಸಂಬಂಧ ಬೆಳಸುವವನನ್ನು 'ಬೋಳ್ ಮಂಡೆ ಕೂಚ" ಎಂದು ಕರೆಯುತ್ತಾರೆ. ಆದರೆ ಇಂದು ಈ ಬಗೆಯ ಸಾಮಾಜಿಕ ವ್ಯವಸ್ಥೆ ಕುಸಿದಿದೆ. ಇಂತಹ ಸಂಬಂಧಕ್ಕೆ ಹೆಣ್ಣು ಪ್ರತಿರೋಧ ವ್ಯಕ್ತಪಡಿಸಿದ ಉದಾಹರಣೆಗಳು ಜನಪದ ಗೀತೆಗಳಲ್ಲಿ ಉಪಲಬ್ಧವಿವೆ :

ಅಣ್ಣ ತಮ್ಮ ದಂಡಿಗೆ ಹೋಗಿದ್ದರು. ಕೆಲದಿನಗಳ ಮೇಲೆ ಅಣ್ಣನನ್ನು ಬಿಟ್ಟು ತಮ್ಮ ಮನೆಗೆ ಬಂದು, ಅತ್ತಿಗೆಗೆ ಕದ ತೆಗೆಯಲು ಬಿನ್ನವಿಸುತ್ತಾನೆ. ಕಂದ ಕಾಲ ಮೇಲಿದ್ದ ನೆವವನ್ನೊಡ್ಡಿ ಅತ್ತಿಗೆಯು ಬಾಗಿಲು ತೆರೆಯಲಿಲ್ಲ, ಆದರೆ ಮೈದುನ ಬಿಡಬೇಕಲ್ಲ :

ಕಾಲ ಮೆ-ನನ ಕಂದನ ನೆಲದ ಮೆ-ನಿಕ್ಕತ್ತೂಗಿ
ಕಬ್ಬೀನಂತೋಳೆ ಕದ ತೆಗೆ । ಅತ್ತೂಗಿ
ಮುತ್ತೀನ ಗೊಂಡೆ ಮುಡಿಶೂನೆ ।
ಅತ್ತೂಗಿ ಮೊಕಶೆಂದ[೨೧] ಮುತ್ತೀನ ಮುಡಿಶೆಂದ
ಅತ್ತೂಗಿ ನಿನ್ನಾ ಮಯ್‌ಬಣ್ಣ । ಅತ್ತೂಗಿ
ಚುತ್ತಾಡಿ[೨೨] ಬಂದೆ ನಿನಗಾಗಿ ।

---

೨೦. ಮೈದುನ, ಮೈದುನಿ ಈ ಪದಗಳು ಮೈಥುನ ಶಬ್ದದಿಂದ ಹುಟ್ಟಿದಂತಿವೆ. ಒಂದು ಕಾಲಕ್ಕೆ ಅವಿಭಕ್ತ ಕುಟುಂಬಗಳಲ್ಲಿ, ಅತ್ತಿಗೆ ಮೈದುನ, ಭಾವ ಮೈದುನಿ, ಇವರಲ್ಲಿಯ ಸಂಯೋಗ ಅನೈತಿಕವಾಗಿದ್ದಂತಿಲ್ಲ.

೨೧. ಮುಖಚೆಂದ ೨೨. ಸುತ್ತಾಡಿ

ಮೈದುನನ ಸವಿಮಾತಿಗೆ ಅತ್ತಿಗೆ ಜಗ್ಗಲಿಲ್ಲ. ಬಾಗಿಲಲ್ಲಿ ಕಾದು ಬೇಸತ್ತ ಮೈದುನ, ಕಾಳಿಯ ಹಟ್ಟಿಗೆ ಬಂದು, ಕಾಳಿಯ ಕಣ್ಣಿ ಕಳಚಿ, ಅತ್ತಿಗೆಯ ಪ್ರೀತಿಯ ಹೂಬನಕ್ಕೆ ಮೇಯ ಬಿಡು ತ್ತಾನೆ. ಕಾಳಿಯನ್ನು ಹೊಡೆದೆಬ್ಬಲು ಅತ್ತಿಗೆ ಕದ ತೆರೆಯುತ್ತಾಳೆ. ಕಾಳಿಯನ್ನು ಹಟ್ಟಿಗೆ ಹೊಡೆದು ಮನೆಗೆ ಬರುತ್ತಾಳೆ. ತೊಟ್ಟಿಲ ಕಂದನಿಗೆ ಮೊಲೆಕೊಟ್ಟು, ಕಣ್ಣಿಗೆ ಕಪ್ಪಿಟ್ಟು ಕಂದನನ್ನು ಮುದ್ದಿಸಿ ತೊಟ್ಟಿಲಲ್ಲಿಟ್ಟು. ಕಡೆಗಣ್ಣಲ್ಲಿ ಕಣ್ಣೀರಿಡುತ್ತಾಳೆ. ಅತ್ತಿಗೆ ಮೈದುನರ ಒಂದುಗೂಡುವಿಕೆಯನ್ನು ಕವಿ ಬಣ್ಣಿಸಿಲ್ಲ. ಮೈದುನನ ನಡತೆ ಯಿಂದ ಆತ ಅತ್ತಿಗೆಯನ್ನು ಭೋಗಿಸದೆ ಹಿಂತಿರಗುವವನಲ್ಲ ವೆಂಬುದು ಸುಸ್ಪಷ್ಟ. ಕುಲಾಚಾರದಂತೆ "ಬೋಳ್‌ಮುಂಡೆಕೂಚ"ನ ಮನ ತಣಿಸಬೇಕಲ್ಲ. ಈ ಕುಲಾಚಾರಕ್ಕೆ ಮಣಿದ ಅತ್ತಿಗೆ, ಕಣ್ಣೀ ರಿಟ್ಟು ಮನಸ್ಸಿಲ್ಲದ ಮನಸ್ಸಿನಿಂದ ಮೈದುನನಿಗೆ ತನ್ನನ್ನು ಅರ್ಪಿಸಿ ಕೊಂಡಿರಬೇಕು.

ಇನ್ನೊಂದು ಸನ್ನಿವೇಶವನ್ನು ಗಮನಿಸಿರಿ :

> ಕೆನ್ನೀಯ ಕುದಲೀ ಕೆಸ್ನೀಗೆ ಕಮುಚೀದೊ[೨೩]
> ಶನ್ನಚಿಯೆಂಬ[೨೪] ಕಿರಿಮಯ್ದು। ಏನಂದಾನೇ
> ಅಟ್ಟಲೇ[೨೫] ಅಡಗಿದ್ರೆ ಬಡಶಂದ।[೨೬]

ಅಟ್ಟ ಅಡಿಗೆಯಿದ್ದಲ್ಲಿ ಬಡಿಸೆನ್ನುತ್ತಾನೆ ಮೈದುನ. ಮೈದುನನಿಗಾದ ಹಸಿವೆ ಯಾವುದೆಂದು ಅತ್ತಿಗೆಗೆ ಗೊತ್ತು. ಅವಳೂ ಧ್ವನಿಪೂರ್ಣವಾಗಿಯೇ ಉತ್ತರಿಸುತ್ತಾಳೆ :

---

೨೩. ತುಂಬಿಕೊಂಡಿವೆ. ೨೪. ಸಂನ್ಯಾಸಿಯೆಂಬ ೨೫. ಮಾಡಿದ
೨೬. ಊಟಕ್ಕೆ ಹಾಕು ಎಂದ

ಅಟ್ಟಲೇ ಅಡಿಗಿಲ್ಲ ಶುಟ್ಟಲೇ ಹೋಳಗಿಯಿಲ್ಲ
ಕಟ್ಟಲಿ ಪತ್ರರೋಳೀಯೋ[೨೭] ಮೊದಲಿಲ್ಲ। ಬೆರಗೀನ[೨೮] ಮಯ್ದ
ನೀನ್ಹೋಗೋಹವಾರ್ ಜಲೂದಿಗೋ[೨೯]। ಚಿಕನಾಜಿ ಮಯ್ದ
ಉಟ್ಟಲೆ ಕಚ್ಚೆ ಚಳಕೊಳೋ[೩೦]।

ಅತ್ತಿಗೆಯು ಅಟ್ಟ ಅಡಿಗೆಯೂ ಇಲ್ಲ, ಸುಟ್ಟ ಹೋಳಿಗೆಯೂ ಇಲ್ಲ; ಅವನಿಗೆ ಹರಿವ ಹಳ್ಳವೇ ಗತಿಯೆನ್ನುತ್ತಾಳೆ. ಹರಿವ ನೀರಿಗೆ ಶಾಸ್ತ್ರವಿಲ್ಲ; ಆ ನೀರು ಯಾರೂ ಕುಡಿಯಬಹುದು. ಆದರೆ ಕಟ್ಟಿದ ಬಾವಿ ವೈಯಕ್ತಿಕ ಸೊತ್ತು. ಅತ್ತಿಗೆಯ ದೃಷ್ಟಿಯಲ್ಲಿ ಅವಳು ಹರಿವ ನೀರಲ್ಲ; ಬಾವಿಯ ನಿಂತ ನೀರು. ಅದು ಮೈದುನ ಕಚ್ಚೆ ಸೆಳಕೊಳ್ಳುವ ನೀರಲ್ಲ. ಚಿಕನಾಸಿ ಮೈದುನ ಹರಿವ 'ಹಡಬೆ' ನೀರಿನೆಡೆ ಬೇಕಾದರೆ ಹೋಗಲಿ ಎಂದು ಅತ್ತಿಗೆ ಪ್ರತಿಭಟಿಸುತ್ತಾಳೆ.

ಮೈದುನರ ನೆನಪಿನಲ್ಲಿಯೇ ಪ್ರಪಂಚ ಮರೆಯುವ ಅತ್ತಿಗೆಯರೂ ಇಲ್ಲದಿಲ್ಲ :

ಬೋಕಳೂವ[೩೧] ಜುರಿಯುತ್ತೆ[೩೨] ಮನಿ ಮಯ್ದನ ನೋಡುತ್ತೆ
ಒಳಗೆಲ್ಲ ಚೆಲ್ಲಾಳೋ ಚೆರೆಮುತ್ತ । ಅತ್ತೂಗೆ
ಯಾರಲಿ ದೆ-ನದಲಿ ಮರಕುಂಡೆ। ಲತ್ತೂಗೆ
ಮನಿ ಮಯ್ದಾನ ನೋಡೇ ಮರಕುಂಡೆ।[೩೩]

ಮಯ್ದುನನಿಗೆ ಮನಸೋತ ಅತ್ತಿಗೆಯ ಮಾದಕ ಸ್ಥಿತಿಯನ್ನು ಮೇಲಿನ ಪದ್ಯ ಚೆನ್ನಾಗಿ ಚಿತ್ರಿಸುತ್ತದೆ.

ಅಣ್ಣನ ಹೆಂಡತಿಯು ಮೈಸಲಿಗೆ. ತಮ್ಮನು ಅವಿವಾಹಿತನಾಗಿರುವವರೆಗೆ ಮಾತ್ರ ಸಮ್ಮತ. ಆದರೆ ತಮ್ಮನ ಹೆಂಡತಿಯು ಮೈ ಮುಟ್ಟುವುದೂ ಅಣ್ಣನಿಗೆ ನಿಷಿದ್ಧ.

---

೨೭. ಊಟದ ಎಲೆ ೨೮. ಬೆಡಗಿನ ೨೯. ಹಳ್ಳ ೩೦. ಒಗೆದುಕೋ
೩೧. ಬಕುಳ ಹೂ ೩೨. ಸುರಿಯುತ್ತ ೩೩. ಮೈಮರತೆ

ಹೆಣ್ಣು ಗಂಡಿನ ಸಂಬಂಧದಲ್ಲಿ ಹಾಲಕ್ಕಿ ಒಕ್ಕಲಿಗರು ಹೆಚ್ಚಿಗೆ ತಲೆ ಕೆಡಿಸಿಕೊಂಡವರಲ್ಲ. ಯಾವುದೋ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿದ ಹೆಣ್ಣು ಮತ್ತೊಬ್ಬನ ಕಾಮ ಪಿಪಾಸೆಗೆ ಬಲಿಯಾದರೆ ಅವಳ ವಿಷಯದಲ್ಲಿ ಕಠೋರ ಶಾಸನ ವಿಧಿಸುವುದು ಕಡಿಮೆ. ಕೆಲವು ಸಲ ಹೆಂಡತಿಯ ಅನೈತಿಕ ವ್ಯವಹಾರವನ್ನು ಗಂಡ ಮರೆತು ಅವಳ ಜೊತೆಯಲ್ಲಿ ಕೂಡಿ ಬಾಳಲು ಹವಣಿಸಿದ ದೃಷ್ಟಾಂತಗಳು ಸಿಗುತ್ತವೆ.

## ೫. ಆರಾಧನೆ

### ೧. ಹಲವು ದೇವತೆಗಳ ಉಪಾಸನೆ :

ಹುಲಿ ನಾಗಗಳನ್ನು ಪೂಜಿಸುವುದು, ಬೆಳೆದ ಬೆಳೆ, ವೃಕ್ಷವನ್ನು ಆರಾಧಿಸುವುದು, ವೀರ ದೇವತೆ ಮತ್ತು ಅಮ್ಮನ ಉಪಾಸನೆ, ಶಿವ, ವಿಷ್ಣು ಮುಂತಾದ ಪೌರಾಣಿಕ ದೇವತೆಗಳ ಅರ್ಚನೆ ಮುಂತಾದುವೆಲ್ಲ ಹಾಲಕ್ಕಿಗಳಲ್ಲಿ ರೂಢಮೂಲವಾಗಿ ಬೆಳೆದು ಬಂದಿವೆ. ಉತ್ತರ ಕನ್ನಡಜಿಲ್ಲೆಯಲ್ಲಿ ವೃಕ್ಷ ಹಾಗೂ ಪ್ರಾಣಿ ಪೂಜೆಗೆ ಟೋಟೆಮಿಷ್ಟರಾದ ಹಾಲಕ್ಕಿ ಒಕ್ಕಲಿಗರು ಬುನಾದಿ ಹಾಕಿದಂತಿದೆ. ಇವರು ದೇವರೆಂದು ಪೂಜಿಸುವ ಎತ್ತರವಾದ ಮರದ ಕೆಳಗೆ ಹಾವು ಇಲ್ಲವೆ ಹುಲಿಯ ಹೆಸರಿನಲ್ಲಿ ಹುತ್ತನ್ನು ಇಲ್ಲವೇ ಕಲ್ಲನ್ನು, ಇಲ್ಲವೇ ಕಲ್ಲಿನ ಮೂರ್ತಿಯನ್ನು ಪೂಜಿಸುತ್ತಾರೆ. ಹಾಲಕ್ಕಿಗಳ ತರುವಾಯ ಈ ಜಿಲ್ಲೆಗೆ ಬಂದಿರಬಹುದಾದ ಮಾತೃಪ್ರಧಾನ ಸಂಸ್ಕೃತಿಯುವರು 'ಅಮ್ಮ'ನ ಉಪಾಸನಾ ಪದ್ಧತಿಯನ್ನು ಬಳಕೆಯಲ್ಲಿ ತಂದಂತಿದೆ. ಇವೆರಡು ಸಂಸ್ಕೃತಿಯು ಮುಂದೆ ಒಂದೆಡೆ ಬೆರೆತು ಸಮ್ಮಿಶ್ರ ಜನಾಂಗವಾಗಿ ಬೆಳೆದಂತಿದೆ. ಏಕೆಂದರೆ ಇವೆರಡು ಸಂಸ್ಕೃತಿಗಳ ಜನರ ಸಾಂಪ್ರದಾಯಿಕ ನಡೆ ನಡಾವಳಿಗಳ ಹೊರ ತೋರಿಕೆಯಲ್ಲಿ ಅಸ್ಫುಟತೆಯಿದೆ. ವೃಕ್ಷ ಪೂಜೆ, ಪ್ರಾಣಿಪೂಜೆ, ಅಮ್ಮನ ಉಪಾಸನೆ, ವೀರಪೂಜೆ ಇವು ಟೋಟೆಮಿಷ್ಟರು ಮತ್ತು ಮಾತೃ ಪ್ರಧಾನ ಸಂಸ್ಕೃತಿಯುವರಿಗೆ ಸಾಮಾನ್ಯವಾಗಿವೆ.

ಹಾಲಕ್ಕಿ ಒಕ್ಕಲಿಗನು ಒಂದೊಂದು ಕಾರಣಕ್ಕಾಗಿ ಒಂದೊಂದು ದೇವತೆಯನ್ನು ಅವಲಂಬಿಸುತ್ತಾನೆ. ಗಾಳಿಯ ಉಪದ್ರವದಿಂದ ಅವನನ್ನು ರಕ್ಷಿಸುವವಳು ಶಿರಸಿಯ ಶೀವಮ್ಮ. ಫಲಪ್ರದ ಬೇಟೆಗಾಗಿ ಅವನು ಹರಕೆ ಹೊರುವುದು 'ಬ್ಯಾಟೀ ಬೀರಪ್ಪನಿಗೆ ಇಲ್ಲವೇ

ಜಟ್ಟಿಗನಿಗೆ. ವಸ್ತು ಒಡವೆ ಕಳವಾದರೆ ಪ್ರಾಸ್ತಿಯಮ್ಮನಿಗೆ ಅಥವಾ ಮಾತು ತಪ್ಪದ ಮಂಜುನಾಥನಿಗೆ ಹರಕೆ ಕಟ್ಟುತ್ತಾನೆ. ಸುಖ ಸಮೃದ್ಧಿಗಾಗಿ ತಿರುಪತಿಯ ತಿಮ್ಮಪ್ಪನಿಗೆ ವಂದಿಸುತ್ತಾನೆ. ಇವಲ್ಲದೇ ಬೇರೆ ಬೇರೆ ಸಂದರ್ಭಗಳಲ್ಲಿ ಆತ, ಕಡಬ, ಹೊಸಬ, ಬೊಮ್ಮಯ್ಯ, ಪುಂಗಾಲ ಹುಲಿಯಪ್ಪ ಮುಂತಾದ ಅನೇಕ ದೇವತೆಗಳನ್ನು ಕುರಿತು ಹಾಡಿ ಕುಣಿದು, ತನ್ನ ಭಕ್ತಿ ಗೌರವವನ್ನು ಸಮರ್ಪಿಸುತ್ತಾನೆ. ವಿವಿಧ ದೇವತೆಗಳ ಹಬ್ಬ ಹರಿದಿನ ಮಾಡಿ ದೇವತೆಗಳ ಲೀಲಾ ವಿಲಾಸಗಳನ್ನು ಅಭಿನಯಿಸಿ ತನ್ನ ಭಕ್ತಿಯನ್ನು ಪ್ರಕಟಿಸುತ್ತಾನೆ.

**೨. ವೀರ ಪೂಜೆ :**

ಯುದ್ಧರಂಗದಲ್ಲಿ, ಜಟ್ಟಿಗಾಳಗದಲ್ಲಿ, ಬೇಟೆಯಲ್ಲಿ ಹೋರಾಡಿ ಸತ್ತ ವೀರರ ಸ್ಮಾರಕವಾಗಿ ಕಲ್ಲು ನೆಟ್ಟೋ, ಮೂರ್ತಿಯನ್ನು ಕೆತ್ತಿಯೋ, ಬೀರ ಇಲ್ಲವೆ ಜಟ್ಟಿಗನೆಂದು ಕರೆದು ಪೂಜಿಸುವ ವಾಡಿಕೆ ಕರಾವಳಿಯಲ್ಲಿದೆ. ಈ ಬೀರ ದೇವತೆಗಳಿಗೆ ವರ್ಷಕ್ಕೊಮ್ಮೆ ಬಂಡಿ ಹಬ್ಬದ ಕಾಲಕ್ಕೆ ಕೋಳಿ ಕುರಿಗಳ ರಕ್ತ ಬಲಿಯಾಗುತ್ತದೆ. ಜಟ್ಟಿಗನ ಗುತ್ತುಗಳಿಗೆ ವರ್ಷಕ್ಕೊಮ್ಮೆ ಜಟ್ಟಿಗನ ಹಬ್ಬ ಮಾಡಿ ಕೋಳಿ ಕುರಿ ಬಲಿಗೊಡುತ್ತಾರೆ :

ತಂದಾನ ತಾನೋ ತಾನೆ ತಂದಾನೋ
ನಮ್ಮ ಜಟಗಾನ[೧] ಪೂಜೆಗೆ ಕೋಳಿ ತಂದಾನೋ
ಕೋಳಿ ತಂದಾನೋ ಮತ್ತೆ ಕೊಳ ತಂದಾನೋ
ತಂದಾನ ತಾನೋ ತಾನೆ ತಂದಾನೋ
ನಮ್ಮ ಜಟಗಾನ ಪೂಜೆಗೆ ಹೂಗ[೨] ತಂದಾನೋ
ಅಡಕೆಕಾಯಿ ಆಗದಿದ್ರೆ ನಡಕ ಜರ[೩] ಬಿಡದಿದ್ರೆ

---

೧. ಜಟ್ಟಿಗನ ೨. ಹೂವು ೩. ಚಳಿಜ್ವರ

ಅಸ್ನದಗಳು ಬೇಯುದಿದ್ರೆ ಕೋಳಿ ತಂದಾನೋ
ತಂದಾನ ತಾನೋ ತಾನೆ ತಂದಾನೋ
ನಮ್ಮ ಜಟಗಾನ ಪೂಜೆಗೆ ಹಣ್ ತಂದಾನೋ
ಬ್ಯಾಟೀ[೪]ಗೀಟಿ ಆಗದಿದ್ರೆ ಮಾಟ ಮೋಡಿ ಮಾಡಿದ್ದಿದ್ರೆ
ಕೋಳಿ ಅಂಕ ಗೆಲ್ಲದಿದ್ರೆ ಕೋಳಿ ತಂದಾನೋ|

ಹೀಗೆ ಬಲಿಕೊಟ್ಟು ಜಟ್ಟಿಗನನ್ನು ಪೂಜಿಸಿದಲ್ಲಿ, ಶಕ್ತಿ ಹ್ರಾಸವಾದ ಜಟ್ಟಿಗ, ರಕ್ತಪಾತದಿಂದ ಗಟ್ಟಿಗೊಂಡು ತಮ್ಮ ಆಶೋತ್ತರಗಳನ್ನು ಪೂರೈಸುವನೆಂಬ ನಂಬಿಕೆ ಹಾಲಕ್ಕಿಗಳಲ್ಲಿದೆ. ಬಲಿ ಪಶುವಿನ ಚೈತನ್ಯವು ಬಲಿಕೊಟ್ಟವನಲ್ಲಿ ನೆಲೆಸಿ, ಅವನ ಶಕ್ತಿವರ್ಧನೆಯಾಗುವುದೆಂಬ ನಂಬಿಕೆಯೂ ಇಂತಹ ಬಲಿಗಳಿಗೆ ಪ್ರೇರಣೆಯನ್ನಿತ್ತಿದೆ.

**೩. ವಿಷ್ಣು ಉಪಾಸನೆ :**

ಹಾಲಕ್ಕಿ ಒಕ್ಕಲಿಗರು ವೈಷ್ಣವ ಮತಾವಲಂಬಿಗಳು. ಅವರ ಮನೆಯ ಮುಂದೆ ತುಲಸಿಯ ಕಟ್ಟೆ ಇಲ್ಲವೆ ವೆಂಕಟರಮಣನ ಮೂರ್ತಿಯಿಂದೊಪ್ಪುವ 'ತುಲಸಿ ಮನೆ'ಯಿದೆ. ಹಾಲಕ್ಕಿಗಳು ತಿರುಪತಿಯಾತ್ರೆ ಮಾಡುವಲ್ಲಿ ತಮ್ಮ ಬಾಳಿನ ಪರಮಾರ್ಥ ವನ್ನು ಕಾಣುತ್ತಾರೆ. ಆ ಯಾತ್ರೆ ಪೂರೈಸಲು 'ಚಕ್ರ'[೫]ಕಟ್ಟುವ ಪದ್ಧತಿ ಹಿಂದಕ್ಕಿತ್ತು. ಹೀಗೆ ಸಂಗ್ರಹಿಸಿದ ಹಣದಿಂದ ತಿರುಪತಿಯ ಯಾತ್ರೆ ಮಾಡುತ್ತಿದ್ದರು. ಯಾತ್ರೆ ಮಾಡಿಬಂದ ಭಕ್ತರಿಗೆ 'ದಾಸ' ರೆಂದು ಕರೆದು ಅವರಿಗೆ ಹಿರಿಯ ಮರ್ಯಾದೆ ಸಲ್ಲಿಸುತ್ತಾರೆ :

---

೪. ಬೇಟೆ ೫. ನಾಲ್ಕಾಣೆ ಪಾವಲಿ ತೀರ ಬಡವರಾದವರು ದೇವರ ಹೆಸರಿನಲ್ಲಿ ಚಕ್ರಾಕಾರದ ಪಾವಲಿಯನ್ನು ಕೂಡಿಸುತ್ತ ದೊಡ್ಡ ಮೊತ್ತವಾದ ಮೇಲೆ ಯಾತ್ರೆ ಮಾಡುತ್ತಾರೆ.

ದಾಚಯ್ಯ[೬] ಬರುತನೆ ಬೀಚಿರೆ[೭] ಚವಲವ
ದಾಚಯ್ಯನಲ್ಲ ತಿರುಮಲ್ಲ|ತಿಮ್ಮಪ್ಪಗೆ
ಹಾಚೀರೊಜ್ರದ[೮] ಹಲೋಗಿಯು।[೯]

ಈ ದಾಸನನ್ನು ಸಾಕ್ಷಾತ್ ತಿಮ್ಮಪ್ಪನೆಂದೇ ಬಗೆಯುತ್ತಾರೆ. ಯಾತ್ರೆ ಮಾಡಿ ಬಂದ 'ದಾಸ'. ತನ್ನ ನೆಂಟರಿಷ್ಟರನ್ನೆಲ್ಲ ಆಹ್ವಾನಿಸಿ 'ಹರಿದಿನ'ವೆನ್ನುವ ವಿಶೇಷ ಕಾರ್ಯವನ್ನಾಚರಿಸಿ, ವೆಂಕಟರಮಣ ನನ್ನು ಕುರಿತು ಹಾಡಿ ತನ್ನ ಭಕ್ತಿ ನಿಷ್ಠೆಯನ್ನು ತೋರಿಸುತ್ತಾನೆ: ಸಿನ್ನದ ಆರುತಿ ಮುಂದೆ ಸಿನ್ನದ ಮೂರುತಿ ಮುಂದೆ ಕನ್ನಿಯರು ಮುಂದೆ ಬಲೂಮಿಗೇ[೧೦]। ಗಿರಿಯಪ್ಪಗೇ[೧೧] ಸಿನ್ನದಾರುತಿಯು ಬೆಳೂಗರೆ।

ತಾನು ನಿತ್ಯ ಪೂಜಿಸುವ ತುಲಸಿಯನ್ನು ಕುರಿತು ಹಾಡು ವುದನ್ನೀತ ಮರೆಯಲಾರ :

ಲಾಚೇಲಣ್ಣನ[೧೨] ಕಲ್ಲೋ ಲೀಚೇಲ್[೧೩] ತಮ್ಮನ ಕಲ್ಲೋ
ನೆಡಗೆ ಗೋವಿಂದ್ನ ಜಡೇsಗಲ್ಲೋ।ಬದಿಯಲ್ಲೇ
ಒಡದಿನ್ನೆ ಮೂಡೆಳೊ[೧೪] ತುಳಶ್ಯಮ್ಮ।ಏನಂದಾಳೋ
ಮೂರೇ ಮೊಳನ ಜಾಗ ತನಗಂದೊ।ತೊಳಚಮ್ಮ
ಮಣ್ಣೀನ ಮಂಟಪವೇ ತನಗಂದೊ|ತೊಳಚಮ್ಮ
ತೇಗೀನ ತೋರಣವೆ ತನಗಂದೊ। ತೊಳಚಮ್ಮ
ತಿರುಪತಿ ಬೊಂಬಿ ತನಗೊಂದೊ।ತೊಳಚಮ್ಮ
ನಿಚ್ಚೇ[೧೫] ತಣ್ಣೀರ ಜಳಕಂದೊ।ತೊಳಚಮ್ಮ
ಚೇಡೀ[೧೬] ಒಂದ್ ನೆ–ಮಾ ತನಗಂದೂ।ತೊಳಚಮ್ಮ
ದಾಚಾಳೊಂದ್ ಹೂಂಗೇ ತನಗಂದೊ।ತೊಳಚಮ್ಮ
ನಿಚ್ಚೇ ಒಂದ್ ಪೂಜೇ ತನಗಂದೊ

---

೬. ದಾಸಯ್ಯ ೭. ಬೀಸಿರಿ ೮ ಹಾಸಿರಿ ವಜ್ರದ ೯. ಹಲಿಗೆಯನ್ನು ೧೦. ಶಕ್ತಿಗೆ ೧೧. ತಿಮ್ಮಪ್ಪಗೆ ೧೨. ಆಚೆಯಲ್ಲಿ ಅಣ್ಣನ ೧೩. ಈಚೆಯಲ್ಲಿ ೧೪. ಮೂಡಿವಳು ೧೫. ನಿತ್ಯ ೧೬. ಬೆಳ್ಳಗಿನ ಜೇಡಿ ಮಣ್ಣು.

'ತುಳಚಮ್ಮ'ನ ರೂಪ ವಿಲಾಸ, ಪೂಜೆಯ ವಿಧಾನವನ್ನು ಭಕ್ತನು ಮೇಲಿನ ಪದ್ಯದಲ್ಲಿ ಚಿತ್ರವತ್ತಾಗಿ ಬಣ್ಣಿಸಿದ್ದಾನೆ. ಹಾಲಕ್ಕಿ ಒಕ್ಕಲಿಗರ ಮಂಗಲಕಾರ್ಯಗಳು ನಡೆಯುವುದು ತುಲಸಿಯ ಮುಂದೆ. ಕಾರ್ತಿಕ ದ್ವಾದಶಿಯಂದು ತುಲಸಿಗೆ ಕಬ್ಬು ನಿಲ್ಲಿಸಿ, ತುಲಸಿ ವಿವಾಹವನ್ನು ಮಾಡುತ್ತಾರೆ.

**೪. ಬಲೀಂದ್ರ ಪೂಜೆ :**

ಹಾಲಕ್ಕಿ ಒಕ್ಕಲಿಗರು ಆಚರಿಸುವ ಮುಖ್ಯ ಹಬ್ಬಗಳಲ್ಲಿ ದೀಪಾವಳಿಯೂ ಒಂದು. ಅಂದು ಕೃಷ್ಣಸ್ವಾಮಿಯಾದ ಬಲೀಂದ್ರನನ್ನು ಆದರದಿಂದ ಬರಮಾಡಿಕೊಳ್ಳುತ್ತಾರೆ:

ಬಲ್ಲಿಂದ್ರ ರಾಯಾರೇ ಕಾಲಾದೀಲ್[೧೭] ಬರುವರಲ್ಲ
ಬೆಳ್ಳಿ ರತ ಹತ್ತೇ ಬರುವಾರು|ಬಲ್ಲಿಂದ್ರ ರಾಯಾಗೇ
ಅಡಗೀನ[೧೮] ಹಂದರದಲ್ಲೇ ಮಡೀಬಿಡ್ರೋ[೧೯] |ಪೂಜಾರಿಗುನ್ನ[೨೦]
ತುಳಶಮ್ಮನ ಬುಡ್ಕ್ಯೆ[೨೧] ಮಡೀ ಹಾಚೋ|ಪೂಜಾರಿಗುನ್ನ
ಲಲ್ಲೇ[೨೨] ಬಲ್ಲಿಂದ್ರರಾಯ ಕುಳತಾರೊ।

ದೀಪಾವಳಿಯನ್ನು ಕೆಲವಡೆ ಒಕ್ಕಲಿಗರು 'ಹಟ್ಟಿ ಹಬ್ಬ'ವೆಂದು ಕರೆದು, ಗೋವುಗಳನ್ನು ಪೂಜಿಸುತ್ತಾರೆ. ಇನ್ನು ಕೆಲವೆಡೆ 'ಹಟ್ಟಿ ಹಬ್ಬ'ವನ್ನು 'ಗಂಟಿ[೨೩] ಹುಣ್ಣಿಮೆ'ಯೆಂದು ಕರೆದು, ಕಾರ್ತಿಕ ಹುಣ್ಣಿಮೆಯಂದು ಆಚರಿಸುತ್ತಾರೆ. ಆ ವೇಳೆಯಲ್ಲಿ ದನ ಕರುಗಳನ್ನು ವಿಶೇಷರೀತಿಯಲ್ಲಿ ಸಿಂಗರಿಸಿ, ಪೂಜಿಸಿ, ಬೈಲಲ್ಲಿ ಸ್ವೇಚ್ಛೆಯಿಂದ ಕುಣಿಯಲು ಬಿಡುತ್ತಾರೆ.

ಹಬ್ಬ ಹರಿದಿನಗಳ ಆಚರಣೆಯಿಂದ, ಪಿತೃಪೂಜೆಯಿಂದ, ದೇವತೆಗಳು ಹಾಗೂ ಪಿತೃಗಳು ಸಂತುಷ್ಟರಾಗಿ ತಮ್ಮ ಅಭೀಷ್ಟಗಳನ್ನು ಪೂರೈಸುತ್ತಾರೆ ಎಂದು ನಂಬಿದ ಹಾಲಕ್ಕಿಗಳು ಅವನ್ನು

---

೧೭. ಕಾಲು ಹಾದಿಯಲ್ಲಿ ೧೮. ಕೆಳಗಿನ ೧೯. ಒಗೆದ ಬಟ್ಟೆಯನ್ನು ಬಿಡಿಸು ೨೦. ಪೂಜೆಮಾಡುವ ಪೂಜಾರಿ ೨೧. ಬುಡಕ್ಕೆ ೨೨. ಅಲ್ಲೇ ೨೩. ದನಕರು

ವೈಭವಪೂರ್ಣವಾಗಿ ಆಚರಿಸಿದರು. ದೇವರ ಉತ್ಸವ ಮೂರ್ತಿ ಕಳಸಗಳನ್ನು ಮೆರವಣಿಗೆ ಮಾಡಿ ಕುಣಿಸಿದರು. ಸುಗ್ಗಿ ಹಬ್ಬ, ಯುಗಾದಿಹಬ್ಬ, ಬಂಡೀ ಹಬ್ಬ, ಕರಡಿಹಬ್ಬಗಳಲ್ಲಿ ಕಳಸಗಳ ಮೆರವಣಿಗೆಯಾಗುವುದು, ಹಗಣವಾಡುವುದು ಮುಂತಾದುವೆಲ್ಲ ಬೆಳೆದು ಬಂದದ್ದು ಈ ಹಿನ್ನೆಲೆಯಲ್ಲಿ.

## ೬. ಒಗೆತನ

ಹಾಲಕ್ಕಿ ಒಕ್ಕಲಿಗರು ತಮ್ಮ ಕೌಟುಂಬಿಕ ಜೀವನದಲ್ಲಿ ಕಂಡುಂಡ ನೋವು ನಲಿವುಗಳನ್ನು, ಆ ಕ್ಷಣದಲ್ಲಿ ಭಾವಾತಿರೇಕ ದಿಂದ ಗೀತರೂಪದಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಈ ಒಗೆತನ ಗೀತಗಳಲ್ಲಿ ಬದುಕಿನ ನಾನಾ ಮುಖಗಳ ಉತ್ಕಟಾನುಭವ ಪರಿ ಪಾಕಗೊಂಡು. ಭಾವ ಸಾಂದ್ರತೆಯಿಂದ ಕೆನೆಗಟ್ಟಿ ಸರಳಾಭಿವ್ಯಕ್ತಿ ಯಲ್ಲಿ ಲಯಿಸುತ್ತದೆ. ಹಾಲಕ್ಕಿ ಒಕ್ಕಲಿಗರ ಜೀವನಾನುಭವದ ಸಾರಸ್ವತ ಫಲಗಳು ಈ ಒಗೆತನ ಗೀತೆಗಳು.

### ೧. ಅಣ್ಣ ತಂಗಿ :

ಅಣ್ಣ ತಂಗಿಯನ್ನು ಗಂಡನ ಮನೆಗೆ ಈಗ ತಾನೇ ಕಳಿಸಿ ಕೊಟ್ಟಿದ್ದಾನೆ. ಆಗಲೇ ತಂಗಿಯ ಪ್ರಶ್ನೆ ಯಾವಾಗ ತಿರುಗಿ ಕರೆಯ ಬರುತ್ತಿಯೆಂದು? ಅಣ್ಣ ಉತ್ತರಿಸುತ್ತಾನೆ :

ಕಾರಗದ್ದೆ ಬಿತ್ತುವಾಗೆ ಹುಳಚೀಲೂಂಗಾಗುವಾಗೇ[೧]
ತಂಗೀ ನೀ ಕೊಮರನ ಹಡೆವಾಗೇ।ತಂಗೀಯೋ
ಲಂಗೀ[೨] ತರುತೇನೆ ಲಳಿಯಾಗೇ[೩] ।

ತಂಗಿ ಹೇಳುತ್ತಾಳೆ :

ಲಂಗೀ ತಂದರೆ ಲಳಿಯಾಲಿಕ್ಕೀ ಕಂಬ[೪]
ನಂಗೇನ[೫] ತರುವೆ ಉಡುಗೊರೆಯೋ

ಅಣ್ಣನೆನ್ನುತ್ತಾನೆ :

ನಿಂಗೆ ತರುತಿನೆ ತಂಗಿ ಶಾಶುಮಿ ಕಣ್ಣಿನ ಬಣ್ಣ[೬]
ಪತ್ತೂರನ ಬಣ್ಣ ಶರಪಳಿಯೋ।ತಂಗೀಯೆ
ಉಡಲಕ್ಕೆ ನೀನು ನೆರಿ ತುಂಬೇ। ತಂಗೀಯೆ
ಇಡಲಕ್ಕೀ ನೀನು ಕೆಮಿದುಂಬೇ[೭]

---

೧. ಹುಣಸೆಯ ಹೂಗಾಗುವಾಗ ೨. ಅಂಗಿ ೩. ಅಳಿಯಗೆ ೪. ಹಾಕಿ ಕೊಳ್ಳುವನು ೫. ನನಗೇನು ೬. ಒಂದು ಬಗೆಯ ಸೀರೆ ೭. ಕಿವಿ ತುಂಬ

ಅಣ್ಣ ತಂಗಿಯರ ಪ್ರೀತಿ ಸದಾ ಒಂದೇ ಬಗೆಯಿರುವುದಿಲ್ಲ. ಹೊನ್ನಮ್ಮಲಿಯಂಥ ಅತ್ತಿಗೆಯಿದ್ದರೆ ಕಷ್ಟ; ಮೈದಿನಿ ಕೂಲಿಯಾಳಿ ನಂತೆ ದುಡಿಯಬೇಕು. ಇಂಥ ಬದುಕು ಹೇಗೆ ಸಹ್ಯ?

ಅಕ್ಕೀ ತಳಸಂದ್ರ ಸಾಲೀಗ್ ದೂಳಂಬಳು
ನೋಡಣ್ಣ ಮಡದೀ ಕೆಲಚವಲ

ಅಣ್ಣ ಅತ್ತಿಗೆಯ ಕೈಯಲ್ಲಿಯ ಸೂತ್ರದ ಗೊಂಬೆ ಹೇಳುತ್ತಾನೆ. :

ಮಡದೀ ಕೆಲಚವ ನಮ್ಮನಿಲಿ ಹೇ–ಳ ಬೆ–ಡ[೯] ।
ನೀನು ನಮ್ಮನಿಲಿ ಉಳಿಬೇ–ಡ।
ತಂಗಿಗೆ ಅಣ್ಣನ ಮಾತು ಸಹಿಸಲಾಗಲಿಲ್ಲ:
ಉಟ್ಟ ಚೆ–ಲಿಯಂಟು[೧೦] ಕಟ್ಟೀದ ಮುಡಿಯಂಟೋ
ಬೆಚಲಾದರ್[೧೧] ದಾರಿ ನೆಡಿಬವ್ದೊ[೧೨]

ತಂಗಿ ಉಟ್ಟ ಸೀರೆಯಲ್ಲಿ ಸುಡು ಬಿಸಿಲಿನಲ್ಲಿ ಗಂಡನ ಮನೆಗೆ ನಡೆ ಯುವ ತೀರ್ಮಾನ ಮಾಡುತ್ತಾಳೆ.

## ೨. ಅತ್ತಿಗೆ ನಾದಿನಿ:

ಅತ್ತಿಗೆಗೆ ತನ್ನ ಸಂಬಂಧಿಕರು ಬಂದರೆ ಮಾತ್ರ ಸಂತಸ:
ತನ್ನರು ಬಂದರೆ ತುಪ್ಪನ್ನ ಬಡಸೂಲು[೧೩]
ಗಂಡನ ದೆಶಿಯಾ[೧೪] ಕಿರಿತಂಗಿ। ಬಂದರೆ
ವುರ್ಜರಯೆಂದು[೧೫] ಮನಗೀಲು।

ಅತ್ತಿಗೆಗೆ ಗಂಡನ ಕಿರಿತಂಗಿ ಬಂದರೆ ಉರಿಜ್ವರ ಬರುತ್ತದೆ. ಇಂತಹ ಅತ್ತಿಗೆಯ ಮೇಲೆ ಯಾರಿಗೆ ಆದರ ಉಳಿದೀತು?

---

೮. ಕೆಲಸವನ್ನು ೯. ಹೇಳ ಬೇಡ.
೧೦. ಸೀರೆಯುಂಟು ೧೧. ಬಿಸಿಲಾದರೆ ೧೨. ನಡೆಯಬಹುದು
೧೩. ಬಡಿಸುತ್ತಾಳೆ ೧೪. ಕಡೆಯ ೧೫. ಉರಿಜ್ವರವೆಂದು

ಅತ್ತ್ಯಾಗಿ ಅಂಬೋಳೀ ಕತ್ತೀಲೇ ಕಡಿಯೂವೆ
ಸುತ್ತೇ[16] ಬಾಕೂವೇ[17] ಬಿಪದೀಯ[18] ಅತ್ತ್ಯಾಗವ್ವ
ಕತ್ತ್ಯಾತೇ[19] ಮಾತ್ತ ಜೂಡೂವೇ।[20]

ಅತ್ತಿಗೆಯನ್ನು ಕಡಿದು ಸುಟ್ಟು ಮತ್ತು ಮುಡಿದಾಗ ಮಾತ್ರ ಮಯ್ಯುನಿಗೆ ಸಮಾಧಾನ.

## ೩. ಅತ್ತೆಮನೆ ಸೊಸೆ:

ಅತ್ತೆಯ ಪ್ರಾಬಲ್ಯವಿರುವ ಗಂಡನ ಮನೆಯಲ್ಲಿ ಹೆಣ್ಣು ಕಷ್ಟ ಪಡುವುದೇ ಹೆಚ್ಚು. ಗಂಡ ದುಷ್ಟನಾದರಂತೂ ಹೆಣ್ಣಿಗೆ ಗಂಡನ ಮನೆ ನರಕ:

ಗಂಡರ ಮನೆ ಕೂಲು[21] ಕಂಡೇ ಚೀಗೇ ಮುಲ್ಲು[22]
ಗಂಡರೆಂಬಾರು ಆರು ಹಾವು । ದೆ-ವರೆ
ಪುಣ್ಣೆಲ್ಲ[23] ಅಪ್ಪಪ್ಪಿ ಕಲಗೀರು । ಏನಂದಿ[24]
ಹಾರೋಗುಲಕ್ಕಿ ಹಿಡತಿನ್ನ ।

ಗಂಡರ ಮನೆಯ ಕೂಳು ಹೆಣ್ಣಿಗೆ ಸೀಗೇ ಮುಳ್ಳು. ಗಂಡ ಆರಹಾವು. ಇಂಥಲ್ಲಿ ಹೆಣ್ಣು ಹಾರಿಹೋಗುವ ಹಕ್ಕಿ ಹಿಡಿದು ತಿಂದೇ ಬದುಕಬೇಕು! ಗೋಳಿನ ಮಗಳಾದ ಹೆಣ್ಣು ಸೋಸಿದ ಕಷ್ಟ ಆ ಶಿವನಿಗೇ ಗೊತ್ತು:

ಮಾನಾ ಬಂಗಾ ಚೋಚಿ[25] ಚೀಗ ಯಲಿಯಲುಂಡಿ
ನಾ ಚೋಚಿದ ಬಂಗ ಚಿವಬಲ್ಲ।

---

೧೬. ಸುತ್ತ ೧೭. ಸಾಕುತ್ತೇನೆ ೧೮. ಕಟ್ಟಿಗೆಯನ್ನು ೧೯. ಸುಡುತ್ತಿರುವಾಗ ೨೦. ಮುಡಿ ಯುವೆ ೨೧. ಕೂಳು ೨೨. ಸೀಗೆಯ ಮುಳ್ಳು ೨೩. ಪುಣ್ಯವಿಲ್ಲ ೨೪. ಕಳಿಸಿದ್ದಾರೆ. ೨೫. ಸೋಸಿ

ಈ ಸೊಸೆ ಪಟ್ಟ ಪಾಡು ಅಸ್ವಾದೃಶ :
ಅತ್ತೆ ಕರಕರೆಗೆ ಹೊತ್ತರನೂಟ ಬಿಟ್ಟೆ
ಮಾವನ ಕರಕರೆಗೆ ಮನೆ ಬಿಟ್ಟೆ। ಮನಿಯೆಲಿ ಮಯ್ದು[೨೬]
ಕಳಚೀಕೊಡೊ ನನ್ನ ಚಮೂದರಕೊ।

ಕಷ್ಟ ಸಹಿಸಲಾಗದ ಸೊಸೆ, ಸಮುದ್ರಕ್ಕೆ ಸಾಯಲು ಕಳಿಸಿ ಕೊಡಲು ತನ್ನ ಮೈದುನನಿಗೆ ಅಂಗಲಾಚುತ್ತಾಳೆ.

ಅತ್ತೆಯ ಮನೆಯಲ್ಲಿ ಕಷ್ಟವಿಲ್ಲದೆ, ಎಲ್ಲರ ಕಣ್ತಂಪಾಗಿ ನಕ್ಕು ನಲಿಯುವವರೂ ಇದ್ದಾರೆ :

ಹಾಲಂತ ಅತ್ತ್ಯೋರು ಮಾಯ್ನಂತ[೨೭] ಮಾವ್ನೊರು
ಪುತ್ತ್ರೂಲಿ ಚರದಂತ ಪುರುಚರು। ಬೆನ್ನೀಗೆ
ನೆವಳ ಚರಗೀಯಂತ[೨೮] ಮಯ್ದುರೋ। ಬೆನ್ನೀಗೆ
ಕನ್ನೂಡಿ ಮೊಕದಂತ ಮಯ್ದುನಿಯೋ। ಅವ್ರಮನೆಗೆ
ತಿಂಗಳ ದೆ–ವ್ರಂತ ಚೊಚೆ ಬಂತೋ।

ಇಂತಹ ಪರಿಸರವಿರುವಲ್ಲಿ ಭೂಮಿಯೇ ಸ್ವರ್ಗ. ಸತಿ ಪತಿಯರ ಪ್ರೇಮಮಾಗುವ್ರದು ಇಂತಹ ವಾತಾವರಣದಲ್ಲಿಯೇ :

ಮಲ್ಲೂಗಿ ಹೂಂಗೇ ಮುಚ್ಚೇ ಮಡುಗಿ ಕೊಂಡೇ.[೨೯]
ಯಾತರ ಹೆಳಿಮ–ನೆ[೩೦] ವಳಗೋದ। ನಮ್ಮಲೆ ಅಣ್ಣ
ಅಡಕೋಳ[೩೧] ಹೆಳಿಮ–ನೇ ವಳಗೋದ। ನಮ್ಮಲೆ ಅಣ್ಣ
ಚುಮ್ಮನೆ ಮುಡಿಯಂದ ಮಡದೀಗು ।

ಮಲ್ಲಿಗೆಯನ್ನು ಮುಚ್ಚಿ ಮುಡಿಸಿದರೆ ಪರಿಮಳ ಹೊರ ಬೀಳದಿರುವುದೆ? ಇದು ಸರಿಬರದ ಹೆಂಡತಿ ಹೇಳುತ್ತಾಳೆ :

---

೨೬. ಮನೆಯ ಮೈದುನ ೨೭. ಮಾವಿನಂಥ ೨೮. ಸರಿಗೆಯಂಥ
೨೯. ಅಡಗಿಸಿ ಕೊಂಡು ೩೦. ನೆವದಿಂದ ೩೧. ಅಡಿಕೆಯ ಹೋಳು

ಜುಮ್ಮನೆ[೩೨] ಮುಡಿದರೆ ಗಮ್ಮನೆ ಪರಿಮಳ
ತಂಗೆಲೆ ಜುಬನಾರಿ[೩೩] ಪಳಗಂಪ್ಲೊ । ನೆಲ್ಲನೆ ಕೇಳೋ
ತಂಗೀಗು ನಂಗು[೩೪] ಜಮ ಪಾಲೊ

ತನ್ನ ಪ್ರೀತಿಯ ಮೈದುನನಿಗೂ ಮಲ್ಲಿಗೆಯ ಸಮಪಾಲು ಸಲ್ಲಿಸಲು ನಲ್ಲನಿಗೆ ಸೂಚಿಸುತ್ತಾಳೆ.

ಸಂಸಾರ ಸುಖಕ್ಕೆ ಸಂತಾನವಿಲ್ಲದೆ ಕೋಡು ಮೂಡದು : ಜಂತಾನ ಇಲವೆಂದೆ ಜಂಪೂಗಿ ಗಿಡನೆಟ್ಟೊ

ಜಂಪೂಗಿ ಜಾವಿರದಾ ಹೆಂಗೆ[೩೫] ಒಡೆದೊ । ನಾರೇಣ ಜೊ–ಮಿ
ಹೆಂಗೆಗೊಂದ್ ಜಂತನವ[೩೬] ಕೊಡಬೇಕೊ । ನಾರೇಣ ಜೊ–ಮಿ
ಕೊಡಬೇಕೊ ಮುಂದೀನ ಹೆಜೋರಿಗೊ । ನಾರೇಣ ಜೊ-ಮಿ
ಹೆರಿಯೋರೊಂದೆಜರ ಹೊಗಳೂರೊ ।

ಕುಲದ ಹೆಸರು ಮುಂದುವರಿಸಲು, ಹಿರಿಯರ ಹೆಸರು ಹೊಗಳಲು ಹಾಲಕ್ಕಿ ಗರತಿ ಸಂತಾನ ಬಯಸುತ್ತಾಳೆ, ಹಸು ಮಕ್ಕಳು ಆಡದ ಅಂಗಳ ಅವಳ ಪಾಲಿಗೆ ಬೆನ್ನಗೆ :

ಹಜು ಮಕ್ಕಳಿಲ್ಲದೆ ಹಜೆದೊ[೩೭] ನಮ್ಮಂಗಳೊ
ಬಾಲೆ ತಮ್ಮಯ್ಯ ಹರದೀ ಬಾ ।
ಬಾಲೆ ತಮ್ಮಯ್ಯ ಹರದೀ ಬಂದರೆ
ಹಜದೇ ಬಂದವಗೆ ಹಜು ಮರದೊ ।

ಹಸಿದವರ ಹಸಿವೆ ಹಿಂಗಿಸುವ' ಸಾಮರ್ಥ್ಯ ಮಗುವಿನ ಪ್ರಸನ್ನ ಮುಖಕ್ಕಿದೆ.

---

೩೨. ಸುಮ್ಮನೆ ೩೩. ಶುಭನಾರಿ ೩೪. ನನಗು ೩೫. ಜೊಂಗೆ ೩೬. ಸಂತಾನವನ್ನು ೩೭. ಹಸಿಯಿತು

### ೪. ಅಕ್ಕ ತಂಗಿ :

ಅಕ್ಕ ತಂಗಿಯರ ಅನ್ಯೋನ್ಯತೆಯ ಬಂಧುರ ಕಳವನ್ನವಲೋಕಿಸಿ :

ಅಂಗಳ ದಾಟೂ ಮುಂದೆ ತಿಂಗಳ ದೇವರು ಬಂದೊ
ತಂಗಿ ನೀನುಟ್ಟ ದಚರೀಯು[೩೮]। ಚೆರಗಿನ ಮೇನೇ[೩೯]
ತಿಂಗಳ ದೇವರೇರು[೪೦] ಬರೆದೀರೆ।

ತಂಗಿಯ ಪ್ರಶಾಂತ ಮುಖ ಅವಳುಟ್ಟ ಸೀರೆಯ ಅಂದ ಚೆಂದವನ್ನು ವರ್ಣಿಸಿದ ರೀತಿ ಹೃದ್ಯವಾಗಿದೆ. ತಂಗಿಗೆ ತನ್ನ ಜೊತೆಗೆ ಕೂಡಿ ಹಾಡಲು ಅಕ್ಕನೇಬೇಕು :

ಯಾರು ಹಾಡಿದರೆ ನಂಗೆ ಚರಿ ಕೂಡಾವ್ರೋ[೪೧]
ನಂಗೂಲು[೪೨] ನಮ್ಮಕ್ಕ ಚರಿಕೂಡೆ। ಹಾಡಿದರೆ
ಚಿರಿರಾಮರು ಕೋಲು ಹೊಡಿದಂಗೆ। ದೇವರೆ
ತುಂಬೀಗೇಳೆ[೪೩] ಮತ್ತ[೪೪] ಮಗ್ಗೀದಂಗೆ[೪೫]

ಅಕ್ಕ ತಂಗಿ ಕೂಡಿ ಹಾಡಿದರೆ, ಆ ಹಾಡಿಗೆ ಶ್ರೀರಾಮ ಕೋಲಾಡಿ ಹಾಡಿದ ಸೊಗಸು ಬರುತ್ತದೆ. ದುಂಬಿಗಳ ಗುಂಜಾರವದ ಮಾಧುರ್ಯ ಸೂಸುತ್ತದೆ.

### ೫. ರತಿ ಹಾಸ :

ಮುಗ್ಧಜೀವಿಗಳಾದ ಹಾಲಕ್ಕಿ ಒಕ್ಕಲಿಗರು ತಮ್ಮ ಹೃದಯಕ್ಕೆ ಅನಿಸಿದ್ದನ್ನು, ಬಾಯಿಗೆ ಬಂದದ್ದನ್ನು, ಶೀಲ–ಅಶ್ಲೀಲತೆಯ ಸುಳಿಗೆ ಸಿಕ್ಕಿಸಿ ತಮ್ಮ ಹೃದಯಾಂತರಾಳದಲ್ಲಿಯೇ ಮುಳುಗಿಸಿ ಬಿಡುವುದಿಲ್ಲ. ಮುಚ್ಚುಮರೆಯಿಲ್ಲದೇ ತಮ್ಮ ಹೃದಯವನ್ನು ಬಿಚ್ಚುತ್ತಾರೆ.

---

೩೮.ದಸರಿಯ ೩೯.ಸೆರಗಿನ ಮೇಲೆ ೪೦. ದೇವರನ್ನು ಯಾರು?
೪೧. ಸರಿಕೂಡದು ೪೨. ನನಗೆ ೪೩. ದುಂಬಿಗಳು ೪೪. ಮೈಮರೆತು
೪೫. ಮೊರೆದಂತೆ.

ಮುಡಿ, ಮೊಲೆ ಎರಡನ್ನೂ ಎದೆಬಡಿತವಿಲ್ಲದೇ ಇವರು ಬಣ್ಣಿಸ ಬಲ್ಲರು. ಇವರ ಗೀತಗಳಲ್ಲಿ ಪರಿಪುಳಿಸಿದ ಸಪ್ಪರಾದ ರತಿಭಾವ ಮಕರಂದವನ್ನು ಸವಿಯಿರಿ :

ಕೂವ[೪೬] ಹೊಡುವನ ಕಂಡೆ ಪೀಣ[೪೭] ಹಾಕುವನ ಕಂಡೆ
ಬೆಟ್ಟದಲಿ ಕಂಡೆ ಮಯ್ದುನೋ।ಅಕ್ಕ ಕೇಳೆ
ಚೀರೆಲಿ ಚೆರಗ ತಡೀದಾನೊ।ಮಯ್ದೂನ
ಕೊಳೆಂದೇ[೪೮] ಕೊಡವಾನೋ ಅವಲಕ್ಕಿ|ಕಾಯ್ಬಾಗ[೪೯]
ಬಾರೆಂದೇ ಹಿಡಿದಾನೋ ಬೆಳಿ ಮೊಲೆ।ಮಯ್ದೂನ
ಮೊಪದ[೫೦] ಚೂರಿ ಚೊಂಟಕೋ[೫೧]।

ಬೆಟ್ಟದಲ್ಲಿ ಮೈದುನನು ಅತ್ತಿಗೆಯನ್ನು 'ಕೂ' ಹಾಕಿ. ಸಿಳ್ಳು ಹೊಡೆದು ಕರೆದು. ಅವಲಕ್ಕಿ 'ಕಾಯ್ಬಾಗ' ಕೊಟ್ಟು, ಭೋಗಿಸಿದು ದನ್ನು ಈ ಹಾಡು ವಾಚ್ಯವಾಗಿ, ಆದರೆ ಅಷ್ಟೇ ಸತ್ವಪೂರ್ಣವಾಗಿ ಚಿತ್ರಿಸುತ್ತದೆ. "ಮೊಪದ ಚೂರಿ ಚೊಂಟಕೋ" ಎಂಬ ನುಡಿ ಧ್ವನಿ ರಮ್ಯತೆಯಿಂದ ಕೂಡಿದೆ.

ಚಂಪೂಗಿ ಹೂವೆ ಮರನಾ ಮೆ ನೆಕಿರುವೆ[೫೨]
ಹಾರಿಬಾ ಹೂವೆ ತುರುಬೀಗೆ|
ಹಾರಿ ಬರುವಕೆ ಹಕ್ಕೀ ಪಕ್ಕೀಯಲ್ಲ
ಹತ್ತೀಕೊಯ್ ನೀನು ಮರಹತ್ತಿ
ಹತ್ತಿ ಕೊವ್ವಕೆ ನಾರಿ ಚುತ್ತೇ ಪಾಗಾರುಂಟು[೫೩]
ಹಾರೀಬಾ ನನ್ನ ತುರುಬೀಗೆ|

ಚೆಲುವೆಯನ್ನು ಕಂಡು ಪಡೆಯುವ ಆಶೆ ರಸಿಕ ಗಂಡಿಗೆ. ಆ 'ಹೂವಿಗೆ' ತನ್ನ ಮುಡಿಗೆ ಹಾರಿ ಬರಲು ಸೂಚಿಸುತ್ತಾನೆ. ಆದರೆ ಅನ್ನ ಪಾಲಕರನ್ನು ಬಿಟ್ಟು ಬರುವಷ್ಟು ಸ್ವಾತಂತ್ರ್ಯವಿಲ್ಲ ಅವಳು. ಆತ ಸಾಹಸಿಗನಾದರೆ ಮರ ಹತ್ತಿ ಹೂ ಆಯ್ದುಕೊಳ್ಳಬೇಕು. ಆದರೆ ಹೂವಿದ್ದ ಮರದ ಸುತ್ತಲಿನ ಪಾಗಾರ ದಾಟಿ ಹೂ ಕೊಯ್ಯ

೪೬. ಕೂ ಹಾಕು ೪೭. ಸೀಟಿ ೪೮. ತೆಗೆದುಕೋ ಎಂದು ೪೯. ಕೊಬ್ಬರಿ ತುಂಡು ೫೦. ಮೋಹದ ೫೧. ಸೊಂಟಕ್ಕೆ ೫೨. ಮೇಲೆಕಿರುವೆ ೫೩. ಪಾಗಾರವಿದೆ.

ಲಾರದ ಸ್ಥಿತಿ ಗಂಡಿಗೆ. ಆದರೂ ಬಿಡಲಾರ; ಅವಳು ಹಾರಿಬರುವುದನ್ನೇ ಮತ್ತೆ ಮತ್ತೆ ನಿರೀಕ್ಷಿಸುತ್ತಾನೆ. ಪಾಗಾರ ಹಾರಲಾಗದಿದ್ದರೆ ಆತ ಇನ್ನೆಷ್ಟು ಕಾಲ ಹಾಗೇ ನಿಲ್ಲಬೇಕೇನೋ।

ಸಂಬಳದ ನೌಕರನೊಬ್ಬ ಚೆಲುವೆಯೊಬ್ಬಳಿಗೆ ಮನಸೋತು ಅವಳನ್ನು ತರುಬಿ ಮಾತಾಡಿಸುತ್ತಾನೆ :

ಕಂಚೀ ಹಣ್ಣೀನಂಗೇ ಮಿಂಚೇ ಬಣ್ಣದ ಹುಡುಗಿ
ಮನಚೇ[೫೪] ಬಿತ್ತೆಲೋ ನಿನ ಮೇ–ಸೆ।ಬಣ್ಣದ ಹುಡುಗಿ
ಸಂಬಳ ಬಿಡಲೇನೆ ಬರಲೇನೆ।

ಕಂಚಿಯ ಹಣ್ಣಿನಂತೆ ಮಿಂಚುವ ಹುಡುಗಿಗಾಗಿ ಸಂಬಳವನ್ನು ಬಿಡಲೂ ಯುವಕ ಸಿದ್ಧ.ಆದರೆ ಲೌಕಿಕ ಪ್ರಜ್ಞೆಯುಳ್ಳ ಆ ಯುವತಿ ಚುರುಕಾಗಿಯೇ ಉತ್ತರಿಸುತ್ತಾಳೆ :

ಚಂಬಳ ಬಿಡುವುದು ಬೇಡ ಶೆ-ಕುರಿ[೫೫] ಬಿಡುವುದು ಬೇಡ
ತಿಂಗಳಿಗೊಂಚರಿಗೆ[೫೬] ಗೆಣತನವೋ

ಹೆಣ್ಣಿನ ಹಂಬಲದಿಂದ ಸಂಬಳದ ನೌಕರಿ ಹೋಗಕೂಡದು. ಲೌಕಿಕ ಸುಖಪಡಲು ಅರ್ಥ ಕಾಮಗಳೆರಡೂ ಮುಖ್ಯವೆಂದರಿತ ಹೆಣ್ಣು ತಿಂಗಳಿಗೊಮ್ಮೆ ಯುವಕನ ಸ್ನೇಹ ಕೂಟ ಬಯಸುತ್ತಾಳೆ.

ಹೆಣ್ಣಿನ ಸಹಾನುಭೂತಿ ಕಳೆದುಕೊಂಡ ಗಂಡು ಅಪಹಾಸ್ಯಕ್ಕೆ ವಸ್ತುವಾಗುತ್ತಾನೆ: ಮುಲ್ಲನೊಬ್ಬ ಅಂಗಡಿಗೆ ಹೋದಾಗ ಮಲ್ಲಿಯ ಸೆರಗನ್ನು ತಡೆದನು. ಮಲ್ಲಿ ಹಗಲು ಹೊತ್ತಿನಲ್ಲಿ ಸರಸ ಸಲ್ಲದು; ಮಧ್ಯರಾತ್ರಿಗೆ ಬಾ ಹಾಸಿಗೆಗೆ ಕರೆದು ಕೊಳ್ಳುತ್ತೇನೆಂದಳು. ಖುಷಾಲಾದ ಮುಲ್ಲಾ ಕಂಕುಲ ಜಡಕೊಂಡ.

ತಿರಗೆ ತಿರಗೆ ರೂಮಾಲ್ ಸುತ್ತೀದಾ ಮುಲ್ಲಾ
ನಾಗಾಕೋಲು ಜೋತರ ಉಟ್ಟೇದಾ
ಜರದಾ ಕಂಬೀ ತೊಡಪಾ[೫೭] ಬಿಟ್ಟೇದಾ

ಹೀಗೆ ಡೌಲಿನಿಂದ ಮುಲ್ಲ ಮಲ್ಲಿಯೆಡೆ ನಡೆದ. ರಾತ್ರಿ ಹೊತ್ತಿನಲ್ಲಿ ಮಲ್ಲಿ ಮುಲ್ಲನ ಕುರುಹು ಕೇಳಿದಳು. ಆಗ ಮುಲ್ಲನು,

ಬೆಳಕಿನ ಗಂಡ್ಸಲ್ಲೇ ಮುಲ್ಲಾ ಗಡವಾ[೫೮] ತೋರಸ್ದಾ
ಗಡವಾ ತೋರಲು ಮಲ್ಲಿ ಗಡವಾ ಹಿಡಿದಾಳು

---

೫೪. ಮನಸ್ಸು.
೫೫. ನೌಕರಿ ೫೬. ತಿಂಗಳಿಗೊಮ್ಮೆ ೫೭. ದೋತಿ ೫೮. ಗಡ್ಡವನ್ನು

ರಾಗೀ ಬೀಸು ಕಲ್ಲಿನ ಗುಟ್ಟಕೆ ಶಿಕ್ಸಿಯಾಳೋ[೫೯] ಗಡವಾ
ಹೊಯ್ದಾಡೊ ಹೊಯ್ದಾಡೊ ಮುಲ್ಲಾ ಗಡವಾಲದೀ ಕಂಡಾ
ಮಲ್ಲಿ ರಂಡೆ ಮನ್ಗೋಗ್ ಬೋಮಾನ್[೬೦] ಕಳಕಂಡ.

ಮುಲ್ಲನ ಸರಸ ವಿರಸವಾಗಿ, ಅಪಹಾಸ್ಯಕ್ಕೆ ಗುರಿಯಾದುದನ್ನಿಲ್ಲಿ ಸ್ವಾರಸ್ಯವಾಗಿ ಚಿತ್ರಿಸಲಾಗಿದೆ.

## ೬. ನೀತಿ :

ಹಾಲಕ್ಕಿಗಳ ಪರಿಪಕ್ವ ಜೀವನಾನುಭವದಿಂದ ಮೂಡಿಬಂದ ಅನೇಕ ಗೀತಗಳು ಉದ್ಬೋಧಕವಾಗಿದ್ದು ಚಿಕ್ಕವರಿಗೆ ದಾರಿ ದೀಪ ಗಳಾಗಿವೆ :

ಒಡೆದೀರು ಬಂದರೆ ಕೊಡುವರೆ ತೂಗೂಲ[೬೧]
ಒಡೆದೀರು ಅಲ್ಲ ಬಡವರು। ಬಂದರೆ
ಬಿಡುವರು ಮನೆಯಾ ಕರಿಕುನ್ನಿ ।

ಲೋಕದಲ್ಲಿ ಶ್ರೀಮಂತರಿಗಿರುವ ಆದರ ಸತ್ಕಾರ, ಬಡವರ ಮೇಲಿನ ತಿರಸ್ಕಾರ ಮನೋಭಾವನೆಯನ್ನಿಲ್ಲಿ ನೋಡಬಹುದು.

ಸೂಳೆಗಿಂತ ಕೈಹಿಡಿದ ಹೆಂಡತಿ ಮಿಗಿಲು :

ಚೂಳೆಗೆ ಕೊಡು ಬಣ್ಣಾ ನಾರೀಗೆ ಕೊಡು ಅಣ್ಣಾ
ಚೂಳೆಗಿಂತು ನಾರಿ ಶಲುವೆಯೋ[೬೨] । ಅಣ್ಣಾ ಕೇಳು
ಚೂಳೇರುಂಗುಡಿಯಾ ಶುಡು ಬೇಕೋ। ಅಣ್ಣಾ ಕೇಳು
ಚೂಳೇರ ಮೊಲಿಯಾ ಕೊಯುಬೇಕೋ ।

ಸೂಳೆಯ ವಿಷಯದಲ್ಲಿ ಗೃಹಿಣಿ ವ್ಯಕ್ತ ಪಡಿಸಿದ ಆಕ್ರೋಶ ಮೇಲಿನ ಪದ್ಯದಲ್ಲಿ ತುಂಬಾ ಗಟ್ಟಿಯಾಗಿದೆ. ಸೂಳೆಗೆ ಹೋದವನ ಹೀನ ಸ್ಥಿತಿಯನ್ನು ಬಣ್ಣಿಸುವ ಬಗೆಯನ್ನು ನೋಡಿ :

ಚಾಲಾ[೬೩] ಕೊಟ್ಟೋರ್ ಬಂದಿ ಚೆರಗ್[೬೪] ತಟ್ಟಿಳಿವಾಗೇ[೬೫]
ದಮ್ಮಯ್ಯಾ ಚೂಳಿ ಪಣೆಯಾಗೇ[೬೬]। ಸಿನ್ನಾಲಾ
ಉಟ್ಟು ಬಿಟ್ಟ ಚಾಲಿ ಚೆಳೆವೆನೆ[೬೭] ।

---

೫೯. ಸಿಕ್ಕಿಸಿದಳು ೬೦. ಮರ್ಯಾದೆ ೬೧. ತೂಗುಮಂಚ.
೬೨. ಚೆಲುವೆಯು ೬೩. ಸಾಲ ೬೪. ಸೆರಗು ೬೫. ಹಿಡಿದೆಳೆಯುವಾಗ
೬೬. ಜಾಮೀನಾಗು ೬೭. ಒಗೆಯುತ್ತೇನೆ.

ಸೂಳೆಯು ಉಟ್ಟು ಬಿಟ್ಟ ಸೀರೆಯನ್ನು ಒಗೆಯುತ್ತೇನೆಂದು ಅಂಗಲಾಚುವ ಗಂಡಿನ ಸ್ಥಿತಿ ಕಂಡು ಕನಿಕರವೆನಿಸುತ್ತದೆ

ಜನಪದ ಬದುಕನ್ನು ಹಸನಗೊಳಿಸಲು ಇಂತಹ ನೀತಿ ಗೀತಗಳು ಮುಂಚೂಣಿಯಲ್ಲಿ ನಿಲ್ಲುತ್ತವೆ.

# ೭. ಕಥೆ

ಹಾಲಕ್ಕಿ ಒಕ್ಕಲಿಗರು ಕಥಾಸಾಹಿತ್ಯದ ತವನಿಧಿಗಳು. ಇವರಲ್ಲಿರುವಷ್ಟು ಕಥನ ಗೀತಗಳು ಉತ್ತರ ಕನ್ನಡ ಜಿಲ್ಲೆಯ ಇತರ ಜನಾಂಗಗಳಲ್ಲಿಲ್ಲ. ಕಥನ ಗೀತಗಳನ್ನು ಹೆಂಗಸರು, ಕಳೆಗೆಯ್ಯುವಾಗ, ಸಸಿ ನೆಡುವಾಗ, ಬೆಟ್ಟಕ್ಕೆ ಹುಲ್ಲು, ಸೊಪ್ಪು ಕರಡಕ್ಕೆ ಹೋಗುವಾಗ, ಹಬ್ಬ ಹರಿದಿನಗಳ ಬಿಡುವಿನ ಸಮಯಗಳಲ್ಲಿ ಹೇಳುತ್ತಾರೆ. ಗಂಡಸರು ವಿಶೇಷವಾಗಿ ಗುಮಟೆ ಹೊಡೆಯುವಾಗ ಕ್ವಚಿತ್ತಾಗಿ ಕೋಲಾಡುವಾಗ ಹೇಳುತ್ತಾರೆ. ಕಥೆಗಳಲ್ಲಿ ಪ್ರಾಣಿ ಕಥೆಗಳಿವೆ. ಮಾನವನ ಸ್ವಪ್ನ ಸೃಷ್ಟಿಯ ಫಲಗಳಾದ ಅದ್ಭುತ ರಮ್ಯ ಘಟನೆಗಳಿಂದ ಕೂಡಿದ ರೋಮಾಂಚನಕಾರಿ ಕಿನ್ನರ ಕಥೆಗಳಿವೆ. ದಾಂಪತ್ಯ ಜೀವನದ–ಸರಸ – ವಿರಸ ಅತ್ತೆ – ಸೊಸೆಯರ ಜಗಳ, ಸವತಿ ಮಾತ್ಸರ್ಯ ಹಾಗೂ ಇನ್ನಿತರ ಸಾಮಾಜಿಕ ಸಮಸ್ಯೆಗಳಿಂದ ಕೂಡಿದ ಕಥೆಗಳಿವೆ. ಸೃಷ್ಟಿಯ ಆರಂಭ, ಐತಿಹಾಸಿಕ, ಹಾಗೂ ಅರ್ಧ ಐತಿಹಾಸಿಕ ಸತ್ಯಗಳಿಂದ ಕೂಡಿದ ಐತಿಹ್ಯಗಳಿವೆ, ದೇವತೆಗಳು ದೇವಾಂಶ ಸಂಭೂತರು ಮತ್ತು ಧಾರ್ಮಿಕ ನಡೆನಡಾವಳಿಗಳಿಂದ ಕೂಡಿದ ಅನೇಕ ಪುರಾಣ ಕಥೆಗಳಿವೆ. ಸೃಷ್ಟಿ ಸ್ಥಿತಿ ಲಯಗಳನ್ನು ಕುರಿತು ಹೇಳುವ ಪುರಾಣ ಕಥೆಗಳು ಸದ್ಯ ಹಾಲಕ್ಕಿಗಳಲ್ಲಿ ಲಭ್ಯವಾಗಿಲ್ಲ.

ಪೌರಾಣಿಕ ಕಥೆಗಳಲ್ಲಿ ಮ ಹಾ ಭಾ ರ ತ, ರಾಮಾಯಣ, ಭಾಗವತ, ಶಿವಪುರಾಣಗಳಿಗೆ ಸಂಬಧಿಸಿದ ಕಥೆಗಳಿವೆ. ಆದರಲ್ಲಿಯೂ ಮಹಾಭಾರತಕ್ಕೆ ಸಂಬಂಧಿಸಿದ ಕಥೆಗಳೇ ವಿಪುಲವಾಗಿವೆ. ಈ ಕಥೆಗಳು ಮಹಾಭಾರತಕ್ಕೆ ಭಿನ್ನ ರೀತಿಯಲ್ಲಿ ತಿರುವು ಪಡೆಯುತ್ತವೆ. ಉದಾಹರಣೆಗೆ ಪಾಂಡುರಾಜನ ಕಥೆಯೊಂದನ್ನು ಅವಲೋಕಿಸಬಹುದು: ಪಾಂಡುರಾಜ ಮೃಗಬೇಟೆಗೆ ಹೋದಾಗ ಮೃಗರೂಪದಿಂದ ಭೋಗ ಪಡೆಯುತ್ತಿರುವ ಋಷಿದಂಪತಿಗಳಲ್ಲಿ ಗಂಡನ್ನು ಕೊಲ್ಲುತ್ತಾನೆ. ಆಗ ಪಾಂಡುರಾಜ ಹೆಣ್ಣು ಮೃಗದಿಂದ ಶಾಪಕ್ಕೀಡಾಗಿ, ಕುಂತಿಯಿಂದ ಮಕ್ಕಳನ್ನು ಪಡೆಯದಾದ.

ಮಕ್ಕಳಿಲ್ಲದೇ ಸದ್ಗತಿಯಿಲ್ಲವೆಂದು ಪಾಂಡುರಾಜ, ಕುಂತಿಗೆ ಸ್ವಾಮಿಗಳ ವರಪ್ರಸಾದದಿಂದ ಮಕ್ಕಳನ್ನು ಪಡೆಯಲು ಅನುಮತಿ ನೀಡುತ್ತಾನೆ. ಕುಂತಿಯು ಭಕ್ತಿಗೆ ಮೆಚ್ಚಿದ ಈಶ್ವರ ಸ್ವಾಮಿ, ಅವಳಿಗೆ ಅಯ್ದು ಹರಳುಗಳನ್ನು ಮಂತ್ರಿಸಿ ಕೊಡುತ್ತಾನೆ. ಆ ಹರಳುಗಳಿಂದ ಕುಂತಿಯು ಧರ್ಮರಾಜ, ಭೀಮ, ಅರ್ಜುನ, ನಕುಲ, ಸಹದೇವ ರನ್ನು ಪಡೆಯುತ್ತಾಳೆ. ಬೆಳೆದ ಮಕ್ಕಳು ಪಾಂಡುರಾಜನೆಡೆ ಹೋಗಿ, ವಿದ್ಯೆ ಬುದ್ಧಿಗಾಗಿ ಬೇಡಿದಾಗ ಪಾಂಡು "ನಿಮಗೆ ಹೀಗೆಯೇ ವಿದ್ಯೆಗಳು ಬರಲಾರವು ನಾನು ಸತ್ತಮೇಲೆ ನನ್ನನ್ನು ಸಿವ್‌ಕಳ"[೧]ಕ್ಕೆ ತೆಗೆದುಕೊಂಡು ಹೋದಾಗ ನನ್ನ ಕಿರುಬೆರಳನ್ನು ಕೊಯ್ದು ಅಯ್ದು ಭಾಗಮಾಡಿ ನುಂಗಬೇಕು. ನೀವು ಲೋಕೈಕವೀರ-ರಾಗುತ್ತೀರಿ" ಎನ್ನುತ್ತಾನೆ. ತಂದೆ ತೀರಿಕೊಂಡ ಮೇಲೆ',ಅವನನ್ನು ಶ್ಮಶಾನಕ್ಕೊಯ್ದು ನಕುಲ ಸಹದೇವರು ಅವನ ಕಿರುಬೆರಳನ್ನು ಕೊಯ್ದು ಬಾಯಲ್ಲಿಟ್ಟುಕೊಳ್ಳುತ್ತಾರೆ. ಆದರೆ ಶ್ರೀ ಕೃಷ್ಣ ಅದನ್ನು ಅವರಿಗೆ ನುಂಗಗೊಡಲಿಲ್ಲ. ಇದಕ್ಕೆ ಕಾರಣ ಕಥೆಯಲ್ಲಿ ಉಕ್ತವಾಗಿಲ್ಲ. ಬಹುಶಃ ಕಾರಣ ಹೀಗಿರಬಹುದು: ಪಾಂಡುರಾಜನ ಬೆರಳನ್ನು ಪಾಂಡವರೈವರೂ ತಿಂದಲ್ಲಿ ಅವರು ತನ್ನನ್ನೂ ಮೀರಿದ ವೀರರಾಗುವರು. ಆಗ ತನ್ನ ಮಹತ್ವವು ಹೊರಟು ಹೋಗಿ ತಾನು ಪಾಂಡವರಿಗೆ ಹಿರೇಮಣಿಯಾಗಲಿಕ್ಕಿಲ್ಲ. ತನ್ನ ಪ್ರತಿಷ್ಠೆ ಕುಂದುವುದು ಎಂಬ ದೂರಾಲೋಚನೆಯಿಂದಲೇ ಶ್ರೀಕೃಷ್ಣ ಹಾಗೆ ಮಾಡಿರಬೇಕು.

ಈ ಕಥೆಯು ಉತ್ತರ ಕನ್ನಡಜಿಲ್ಲೆಯಲ್ಲಿ ತೀರ ಪ್ರಾಚೀನ ಕಾಲಕ್ಕೆ ಪಿತೃಮಾಂಸ ಭಕ್ಷಣೆಯಿಂದ ಚೈತನ್ಯ ಪಡೆಯುವ ಸಂಪ್ರದಾಯವಿದ್ದಿರಬಹುದಾದ ಶಂಕೆಯನ್ನು ಬಲವತ್ತರಗೊಳಿಸುತ್ತದೆ.

---

೧. ಸ್ಮಶಾನ

ಮೂಲ ಭಾರತ ಕಥೆ ಯಾವ ಬಗೆಯಲ್ಲಿ ಮಾರ್ಪಡುತ್ತದೆಯೆನ್ನು ವುದಕ್ಕೆ ಇಂತಹ ಅನೇಕ ನಿದರ್ಶನಗಳನ್ನು ಕೊಡಬಹುದಾದರೂ ಅದಕ್ಕೆ ಇಲ್ಲಿ ಅವಕಾವಿಲ್ಲ.

ಹಾಲಕ್ಕಿ ಒಕ್ಕಲಿಗರ ಕಥನಗಳ ನಿರೂಪಣೆ ಸರಳ, ಕೆಲವಡೆ ಶಿಥಿಲ. ಕಥೆಗೇ ಹೆಚ್ಚಿನ ಒತ್ತುಕೊಟ್ಟ ಇವರು, ಪಾತ್ರ ಪೋಷಣೆಗಾಗಲಿ ತಂತ್ರ ನೈಪುಣ್ಯಕ್ಕಾಗಲಿ ಹೆಚ್ಚಿನ ಗಮನ ಕೊಡಲಿಲ್ಲ. ಹೇಳಬೇಕಾದ ಕಥೆಯನ್ನು ನೇರವಾಗಿ ಹೇಳಿ ಮುಗಿಸಿದರು. ಕಥೆಯಲ್ಲಿ ಅಲ್ಲಲ್ಲಿ ಪುನರಾವರ್ತನೆಗಳು ಬಂದರೂ ಕಥೆಯ ಓಟಕ್ಕೆ ಅವು ತೊಂದರೆ ಯನ್ನುಂಟು ಮಾಡುವುದಿಲ್ಲ. ಕಥೆಯ ನಿಟ್ಟೋಟದಲ್ಲಿಯೇ ಹೆಚ್ಚಿನ ಗಮನವುಳ್ಳ ಇವರು ಕಥೆಗೆ ಉಪಕಥೆಗಳನ್ನು ಸೇರಿಸಿ ಕಥಾ ಸಂವಿ ಧಾನದಲ್ಲಿ ಗೋಜಲನ್ನುಂಟು ಮಾಡುವುದಿಲ್ಲ. ಈ ಕಥನ ಕವನಗಳಲ್ಲಿ ಹೇಳಿಕೊಳುವಂತಹ ಉನ್ನತ ಮಟ್ಟದ ಕಾವ್ಯ ಸೌಂದರ್ಯವಿಲ್ಲ ದಿದ್ದರೂ, ನಾಡಿನ ಸಂಸ್ಕೃತಿಯ ಅಧ್ಯಯನಕ್ಕೆ ಇವು ವಿಪುಲ ಸಾಮಗ್ರಿಯನ್ನೊದಗಿಸುತ್ತವೆ ಎನ್ನುವುದನ್ನು ನಾವು ಮರೆಯು ವಂತಿಲ್ಲ.

## ೮. ಕೊನೆಯ ಮಾತು

ಹಾಲಕ್ಕಿ ಒಕ್ಕಲಿಗರು ತಮ್ಮ ಬದುಕಿನ ವೈವಿಧ್ಯಪೂರ್ಣ ಅನುಭವಗಳನ್ನು ಜನಪದಗೀತಗಳಲ್ಲಿ ತೀರ ಸರಳ ಭಾಷೆಯಲ್ಲಿ ಹೇಳಿದ್ದಾರೆ. ಕಠಿಣ ಅಲಂಕಾರ, ಕವಿಸಮಯಗಳ ಗೋಜಿಗೆ ಹೋಗಲಿಲ್ಲ. ಅತ್ಯಂತ ಸುಲಭವಾದ ತ್ರಿಪದಿಯ ತಾಳ ಲಯಕ್ಕೆ ತಮ್ಮನ್ನೊಪ್ಪಿಸಿಕೊಂಡು, ತ್ರಿಪದಿಯಲ್ಲಿಯೇ ಹೆಚ್ಚಾಗಿ ಗೀತಗಳನ್ನು ರಚಿಸಿದರು. ಕಥನ ಕವನಗಳಲ್ಲಿ ಹೆಚ್ಚಾಗಿ ಏಳೆಯ ಸರಪಳಿಯನ್ನು ಇಲ್ಲವೇ ಯಾವುದೋ ಲಯಕ್ಕೆ ಹೊಂದುವ ಪಲ್ಲವಿಯನ್ನು ಬಳಸಿಕೊಂಡು, ರಗಳೆಯಂತೆ ಸಾಲುಗಳ ನಿರ್ಬಂಧವಿಲ್ಲದೇ ಸಾಗಿದರು. ಕೋಲು ಪದಗಳಲ್ಲಿ ಏಳೆಯನ್ನು ಹೋಲುವ ದ್ವಿಪದಿಯನ್ನೇ ಹೆಚ್ಚಾಗಿ ಬಳಸಿದರು. ಪ್ರಾಸ ನಿಯಮಕ್ಕೆ ಕಟ್ಟುಬಿದ್ದು ಕಾವ್ಯವನ್ನು ಕೃತಕಗೊಳಿಸಲಿಲ್ಲ. ಹಾಡುಗಳಲ್ಲಿ ಜನಪ್ರಿಯ ರೂಢಿ, ನಂಬಿಕೆ, ಸಂಪ್ರದಾಯಗಳನ್ನು ಸೇರಿಸಿ ಅವನ್ನು ಸ್ಥಿರೀಕರಿಸಿದರು.

ಇವರ ಎಷ್ಟೋ ಹಾಡುಗಳು ಭಾವತೀವ್ರತೆಯ ಕೊರತೆಯಿಂದಾಗಿ ಉನ್ನತಮಟ್ಟಕ್ಕೇರದೆ, ತಳಮಟ್ಟದಲ್ಲಿಯೇ ಅಂಬೆಗಾಲಿಕ್ಕುತ್ತವೆ. ಆದ್ದರಿಂದ ಇವು ಕಲೋಪಾಸಕರಿಗೆ ಹೆಚ್ಚಿನ ಖುಷಿ ಕೊಡುತ್ತಿಲ್ಲ. ಆದರೂ ಈ ಗೀತಗಳಲ್ಲಿ ಮೈದೋರಿದ ದೇಶಿಯ ಸತ್ವ ಮಾನವ ಶಾಸ್ತ್ರಕ್ಕೆ ಸಂಬಂಧಿಸಿದ ಅಂಶಗಳು ನಮ್ಮ ಮನ ಸೆಳೆಯದಿರುವುದಿಲ್ಲ. ಈ ಗೀತಗಳಲ್ಲಿ ವಿಶೇಷವಾಗಿ ಕಾಣುವುದು

ಸರಳತೆ, ಗೇಯತೆ ಮತ್ತು ಅಕುಟಿಲತೆ. ಹಾಲಕ್ಕಿಗಳು ತಮಗನಿಸಿದ್ದನ್ನು, ತಾವು ಜೀವನದಲ್ಲಿ ಕಂಡುಂಡದ್ದನ್ನು, ಕೂಡಿಮಾಡಿದ್ದನ್ನು, ನೋಡಿ ಕಲಿತದ್ದನ್ನು ಈ ಗೀತಗಳಲ್ಲಿ ಹೇಳಿ ಮುಗಿಸಿದ್ದಾರೆ. ಇವರ ಸಾಂಸ್ಕೃತಿಕ ಅಧ್ಯಯನಕ್ಕೆ ಈ ಗೀತಗಳು ಊರುಗೋಲುಗಳು. ಸುಗ್ಗಿಯ ಕೋಲಾಟ, ಗುಮಟೆ ಪದ, ತಾರ್ಲೆ, ಬೆದ್ರುಂಡೆ ಮುಂತಾದ ಕುಣಿತದ ಹಾಡುಗಳು ಹಾಲಕ್ಕಿಗಳಿಗೇ ವಿಶಿಷ್ಟವಾಗಿದ್ದು, ಅವು ಇಂದು ಇತರರಲ್ಲಿಯೂ ಪ್ರಸಾರವಾಗಿವೆ. ಬೇರೆಡೆಯಲ್ಲಿ ಸಿಗುವ ಅನೇಕ ಗೀತಗಳನ್ನು ಇಲ್ಲಿ ನೋಡಬಹುದಾದರೂ, ಭಾಷಾಭಿನ್ನತೆಯಿಂದ ಇವು ಬೇರೆಯಾಗಿಯೇ ನಿಲ್ಲುತ್ತವೆ. ಹಾಲಕ್ಕಿ ಒಕ್ಕಲಿಗರ ಶಿಷ್ಟಾಚಾರ, ಮತೀಯ ಸಂಪ್ರದಾಯ ಇವುಗಳಿಗೆ ಸಂಬಂಧಿಸಿದಂತೆ ಅನೇಕ ಹೊಸ ಬಗೆಯ ಗೀತಗಳೂ ಇಲ್ಲಿವೆ.

———

## ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

೧ ಜಾನಪದ ಕಥೆಗಳು —ಎಲ್. ಆರ್. ಹೆಗಡೆ

೨ ಜನಪದ ಕಾವ್ಯದಲ್ಲಿ ಜೀವನ ಧರ್ಮ —ಪಿ.ವ್ಹಿ.ಮಲ್ಲಾಪು

೩ ಜನಪದ ಕಾವ್ಯ —ಗಿರಡ್ಡಿ ಗೋವಿಂದರಾಜ

೪ ಜನಪದ ಸಾಹಿತ್ಯದಲ್ಲಿ ಮಾತೃ ವಾತ್ಸಲ್ಯ
—ಲೀಲಾವತಿ ಬಿ. ತೋರಣಗ

೫ ಜನಪದದಲ್ಲಿ ಮಕ್ಕಳ ಸಾಹಿತ್ಯ
—ಸಂಗಮೇಶ ಎಂ. ಬಿರಾದಾರ

೬ ಜನಪದ ಸಾಹಿತ್ಯದಲ್ಲಿ ಕಿರಿದರೊಳೆ ಪಿರಿದರ್ಥದ ಚಲಕ
— ಸಿಂಪಿ ಲಿಂಗ

೭ ಜನಪದ ಸಾಹಿತ್ಯದಲ್ಲಿ ನೀತಿ —ಎಂ. ಎನ್. ವಾಲಿ

೮ ಶಿರಾಲಿಯ ಗೊಂಡರು —ನಾರಾಯಣ ಯಾಜಿ

೯ ಜನಪದ ಸಾಹಿತ್ಯದಲ್ಲಿ ಹಾಸ್ಯ —ಮೃತ್ಯುಂಜಯ ಹೊರಕೇ

೧೦ ಕನ್ನಡ ಜನಪದ ಕಾವ್ಯದಲ್ಲಿ ಭಕ್ತಿಯ ನಿರೂಪಣೆ
—ಬಸವರಾಜ ಮಲಶೆ

---

**ಪ್ರಸಾರಾಂಗ**

ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೫೮೦ ೦೦೩